ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೭ ನವೆಂಬರ್ ೨೦೧೧ ಸಂಚಿಕೆ : ೧೧




ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆದ ತುಮಕೂರು ವಿಶ್ವವಿದ್ಯಾನಿಲಯದ ಐದನೆಯ ವಾರ್ಷಿಕ ಘಟಿಕೋತ್ಸವದಲ್ಲಿ ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ಹೆಚ್.ಆರ್. ಭಾರದ್ವಾಜ್ ಅವರು ಮಾತನಾಡುತ್ತಿರುವುದು. ವೇದಿಕೆಯಲ್ಲಿ ಘಟಿಕೋತ್ಸವ ಭಾಷಣ ಮಾಡಿದ ನೊಬೆಲ್ ಪ್ರಶಸ್ತಿ ವಿಜೇತ ಪ್ರೊ. ರಿಚರ್ಡ್ ಅರ್ನೆಸ್ಟ್, ತುಮಕೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಡಾ. ಎಸ್.ಸಿ. ಶರ್ಮ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಶಿರಾದಲ್ಲಿರುವ ದಿ ಪ್ರಸಿಡೆನ್ಸಿ ಪಬ್ಲಿಕ್ ಶಾಲೆಗೆ ಪೂಜ್ಯ ಶ್ರೀ ಶ್ರೀಗಳವರು ಭೇಟಿ ನೀಡಿದ ಸಂದರ್ಭದಲ್ಲಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಂ. ಚಿದಾನಂದ ಮೊದಲಾದವರು ಭಕ್ತಿ ಗೌರವದಿಂದ ಬರಮಾಡಿಕೊಂಡರು.



ಶ್ರೀಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿ ಅವರು ಜ್ಞಾನಪೀಠ ಪುರಸ್ಕೃತ ಡಾ. ಚಂದ್ರಶೇಖರ ಕಂಬಾರ ಅವರನ್ನು ಸನ್ಮಾನಿಸಿ, ಆಶೀರ್ವದಿಸಿದರು.

ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ
ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ

**ಹೋಟೆಲ್ ಶ್ರೀ ವಿಘ್ನೇಶ್ವರ ಕಂಫರ್ಟ್**

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2255883, 2257770, 2257774, 2257772 ಫ್ಯಾಕ್ಸ್ : 2255873



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣಿತ ಸಿಬ್ಬಂದಿಯ ವಿನೀತ ಸೇವೆ

ಲಿಫ್ಟ್ ಸೌಲಭ್ಯವಿದೆ
ಹವಾನಿಯಂತ್ರಿತ ಉಪಹಾರ ಗೃಹ
ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ





ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ [illegible]ಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಾಗ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


**ಸಂಪುಟ : ೪೭ ನವೆಂಬರ್ ೨೦೧೧ ಸಂಚಿಕೆ : ೧೧**


## ಒಳಪುಟಗಳಲ್ಲಿ ....................






ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಇಚ್ಛಾಶಕ್ತಿ

'೧೯೫೬' ಕನ್ನಡ ನಾಡು ಅಸ್ತಿತ್ವಕ್ಕೆ ಬಂತು. ವಿಶಾಲ ಮೈಸೂರು ಎಂದು ಹೆಸರಾಯಿತು. ೧೯೭೩ರಲ್ಲಿ ಕರ್ನಾಟಕ ಎಂದು ಹೆಸರಾಯಿತು. ಕರ್ನಾಟಕದ ವಿಸ್ತೀರ್ಣ ೧೯೧೭೯೧ ಚ.ಕಿ.ಮೀ. ೧೯೬೩ರಲ್ಲಿ ಕನ್ನಡ ಆಡಳಿತ ಭಾಷೆಯೆಂದು ಘೋಷಿತ ವಾಯಿತು. ಕಚೇರಿಗಳಲ್ಲಿ ಕನ್ನಡವನ್ನು ಪೂರ್ಣ ಜಾರಿಗೊಳಿಸುವ ಬಗ್ಗೆ ೧೯೯೦ರಲ್ಲಿ ಸರ್ಕಾರಿ ಆಜ್ಞೆ ಪ್ರಕಟವಾಯಿತು. 'ಕರ್ನಾಟಕದಲ್ಲಿರುವ ಎಲ್ಲಾ ವಾಣಿಜ್ಯ ಮತ್ತು ವ್ಯವಹಾರ ಸಂಸ್ಥೆಗಳ ನಾಮಫಲಕಗಳು ಕನ್ನಡಲ್ಲಿಯೇ ಇರತಕ್ಕದ್ದು' ಎಂದು ೧೯೮೫ರಲ್ಲಿ ಸರ್ಕಾರಿ ಆಜ್ಞೆ ಹೊರಡಿಸಲಾಯಿತು. ೧೯೮೯ರಲ್ಲಿ ಕರ್ನಾಟಕ ಉನ್ನತ ನ್ಯಾಯಾಲಯವು 'ಪ್ರಾಥಮಿಕ ಹಂತದಲ್ಲಿ ಮಗುವಿನ ಶಿಕ್ಷಣವು ಮಗುವಿನ ಮಾತೃ ಭಾಷೆಯಲ್ಲಿಯೇ ಅಥವಾ ಎರಡನೆಯ ಮಾತೃಭಾಷೆಯಂತಿರುವ ಪ್ರಾದೇಶಿಕ ಭಾಷೆ ಯಲ್ಲಿಯೇ ಇರುವುದು ಕಡ್ಡಾಯವಾಗಿರಬೇಕು' ಎಂದು ತೀರ್ಪು ನೀಡಿತು.

ನಡೆದು ಬಂದ ದಾರಿಯನ್ನು ಹಿಂದಿರುಗಿ ನೋಡಿದರೆ ಏನೆಲ್ಲ ಪ್ರಯತ್ನಗಳು ನಡೆದರೂ ಸಾಧನೆಗಳು ಇನ್ನೂ ಬಹಳವಾಗಿವೆ ಎಂಬುದನ್ನು ಮರೆಯಲಾಗದು. ಇತ್ತೀಚಿನ ದಿನಗಳಲ್ಲಿ ಕನ್ನಡದ ಅಭಿವೃದ್ಧಿಗಾಗಿ ಸಂಘಸಂಸ್ಥೆಗಳು ರಕ್ಷಣಾಪಡೆಗಳು ಸೇನೆಗಳು ಕ್ರಿಯಾಶೀಲವಾಗಿವೆ. ಆದರೂ ಅಂದುಕೊಂಡಷ್ಟು ಪ್ರಗತಿ ಆಗಿಲ್ಲವೆಂಬುದೇನೋ ಸುಳ್ಳಲ್ಲ. ಇಂಗ್ಲೀಷ್ ವ್ಯಾಮೋಹದ ಸನ್ನಿ ಸುಳಿಯಲ್ಲಿ ಸಿಕ್ಕಿ ಕನ್ನಡ ಕಂದಮ್ಮಗಳು ಅಪ್ಪ, ಅಮ್ಮ, ಅಣ್ಣ, ಅಕ್ಕ, ತಂಗಿ, ತಮ್ಮ ಎನ್ನುವುದನ್ನು ಮರೆತು ಅಂಕಲ್, ಆಂಟಿಗಳ ಸಂತಾನವಾಗಿ ಸೊರಗುತ್ತಿವೆ. ಹಳ್ಳಿ ಹಳ್ಳಿಗಳಲ್ಲಿ, ಗಲ್ಲಿ ಗಲ್ಲಿಗಳಲ್ಲಿ ಕಾನ್ವೆಂಟ್ ಶಾಲೆಗಳ ಕ್ಯಾನ್ಸರ್ ಉಲ್ಬಣವಾಗುತ್ತಿರುವುದು ಒಂದು ಕಡೆಯಾದರೆ ಕನ್ನಡ ಶಾಲೆಗಳನ್ನು ಮುಚ್ಚುವ, ವಿಲೀನಗೊಳಿಸುವ 'ಸೇವೆ' ಸರ್ಕಾರದ್ದಾಗಿದೆ. 'ತಾಯ ಮೊಲೆ ಹಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ ದೂರುವೆ' ಎಂಬಂತಾಗಿದೆ ಸರ್ಕಾರದ ಧೋರಣೆ. 'ಇಚ್ಛಾಶಕ್ತಿ'ಯ ಕೊರತೆಯಿಂದಾಗಿ ಕನ್ನಡ ಕೊರಗುವಂತಾಗಿದೆ.

ಹೌದು, ರಾಜ್ಯೋತ್ಸವ ಆಚರಿತವಾಗುತ್ತಿದೆ. ನಿಜವಾದ ಕನ್ನಡ ಪ್ರೇಮ ನಮ್ಮದಾಗಿದೆಯೇ? 'ನನ್ನ ನುಡಿ ಕನ್ನಡ, ನನ್ನ ನಾಡು ಕರ್ನಾಟಕ, ಎಂಬ ಹೆಮ್ಮೆ ಸದಾ ಜಾಗೃತವಾಗಿರಲಿ' ನಾನು ಮೊದಲು ಕನ್ನಡಿಗ, ನಂತರ ಭಾರತೀಯ ಎಂಬುದೇ ನಿಜವಾದ ದೇಶಪ್ರೇಮ'– ಎಂಬುದನ್ನು ದೈನಂದಿನ ಜೀವನದಲ್ಲಿ ಆಚರಣೆಗೆ ತರುವುದೇ ನಿಜವಾದ ಕನ್ನಡ ರಾಜ್ಯೋತ್ಸವದ ಆಚರಣೆ.

–ಸಂಪಾದಕ

**ತಿದ್ದುಪಡಿ**

ಸೆಪ್ಟೆಂಬರ್ ತಿಂಗಳ ಸಂಪಾದಕೀಯ ಲೇಖನದಲ್ಲಿ ಈ ಮೂರು ಮಹನೀಯರ ಹೆಸರುಗಳು ಕಣ್ತಪ್ಪಿನಿಂದಾಗಿ ಬಿಟ್ಟು ಹೋಗಿವೆ. ಹೈಕೋರ್ಟಿನ ನ್ಯಾಯವಾದಿಗಳಾದ ಶ್ರೀ ಎಂ. ಶಿವಪ್ಪನವರು, ನ್ಯಾಯವಾದಿಗಳಾದ ಶ್ರೀ ಕೆ.ಎನ್. ರಾಜಶೇಖರ್ ರವರು, ಶ್ರೀ ಮಹೇಶ್ ಆರ್ ಉಪ್ಪಿನ ಅವರು ಸಮಾರಂಭದಲ್ಲಿ ಭಾಗಿಗಳಾಗಿದ್ದರು ಎಂದು ತಿಳಿಸಲು ಹರ್ಷವಾಗುತ್ತದೆ.







## ಗುರುಪಥ

ನಮ್ಮ ಗುರುಗಳು (ಶ್ರೀ ಶ್ರೀ ಉದ್ಧಾನಸ್ವಾಮಿಗಳು) ಆಚಾರಕ್ಕೆ ಮಹತ್ವ ಕೊಡುತ್ತಿದ್ದರು. ಅರಿವು ಆಚರಣೆಯಲ್ಲಿ ಅಳವಟ್ಟಾಗಲೇ ಸಾರ್ಥಕ ಎನ್ನುತ್ತಿದ್ದರು. ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಸಂಚಾರ ಮಾಡುತ್ತಿದ್ದರು. ಹಳ್ಳಿಗಳಲ್ಲಿ ತಂಗುತ್ತಿದ್ದರು. ಗ್ರಾಮೀಣ ಬಂಧು–ಭಗಿನಿಯರೆಲ್ಲರನ್ನೂ ಒಂದೆಡೆಗೆ ಸೇರಿಸಿ ಪುರಾಣ ಪುಣ್ಯ ಪ್ರವಚನಗಳಲ್ಲಿ ತೊಡಗಿಸುತ್ತಿದ್ದರು. ತಮ್ಮ ಅನುಭವಗಳಲ್ಲಿ ನಡೆದ ಪ್ರಸಂಗಗಳನ್ನು ಹೇಳಿ ಎಚ್ಚರಿಸುತ್ತಿದ್ದರು. ದುಡಿದು ಊಟ ಮಾಡಿ, ಸೋಮಾರಿಗಳಾಗಬೇಡಿ, ಕೂತು ವ್ಯರ್ಥವಾಗಿ ಕಾಲ ಕಳೆಯಬೇಡಿ, ವೃಥಾ ಹರಟೆ ಮಾತುಗಳನ್ನಾಡಬೇಡಿ, ದನಕರುಗಳನ್ನು ಮಕ್ಕಳಂತೆ ನೋಡಿಕೊಳ್ಳಿ. ಮಕ್ಕಳಿಗೆ ಅಕ್ಷರಜ್ಞಾನಕ್ಕೆ ಅವಕಾಶ ಕಲ್ಪಿಸಿ ಎಂದು ಹಿತದ ಮಾತುಗಳನ್ನು ಪದೇ ಪದೇ ಹೇಳುತ್ತಿದ್ದರು.



ಮಠಕ್ಕೆ ಬಂದ ಭಕ್ತಾದಿಗಳನ್ನು ಶಿಸ್ತಿನಿಂದ ನಡೆಸಿಕೊಳ್ಳುತ್ತಿದ್ದರು. ತಮ್ಮ ಪೂಜಾ ಸಂದರ್ಭದಲ್ಲಿ ಭಾಗವಹಿಸಿದವರಿಗೆ ವಿಧಿ ವಿಧಾನಗಳನ್ನು ತಿಳಿಸಿ ಹೇಳಿಕೊಡುತ್ತಿದ್ದರು. ಪಾದಪೂಜೆಯನ್ನು ಹೇಗೆ ಮಾಡಬೇಕು, ಪಾದೋದಕವನ್ನು ಹೇಗೆ ಸ್ವೀಕರಿಸಬೇಕು, ಪ್ರಸಾದವನ್ನು ಹೇಗೆ ಸಲ್ಲಿಸಬೇಕು, ಲಿಂಗಾನುಸಂಧಾನವನ್ನು ಮಾಡುವುದು ಹೇಗೆ? ಲಿಂಗ ಕಟ್ಟಳೆಯಲ್ಲಿ ಅನುಸರಿಸಬೇಕಾದ ಕ್ರಮ ಎಂತಿರಬೇಕು, ಪದ್ಮಾಸನ, ಸಿದ್ಧಾಸನ, ಅನುಕೂಲಾಸನಗಳನ್ನು ಯಾವಾಗ ಹಾಕಬೇಕು. ಪ್ರಸಾದದ ಬಟ್ಟಲನ್ನು ಹೇಗಿಟ್ಟು ಕೊಳ್ಳಬೇಕು, ಪ್ರಸಾದ ಸ್ವೀಕಾರ ಸಮಯದಲ್ಲಿ ಭಕ್ತಿಗೀತೆಗಳನ್ನು, ಅನುಭಾವದ ಹಾಡುಗಳನ್ನು ಹಾಡುತ್ತಿರಬೇಕು. 'ಮೌನದಲುಂಬುವುದು ಆಚಾರವಲ್ಲ ತುತ್ತಿಗೊಮ್ಮೆ ಶಿವಶರಣು ಎನ್ನುತ್ತಿರಬೇಕು'– ಎನ್ನುತ್ತಿದ್ದರು. ನೀಡಿಸಿಕೊಂಡ ಪ್ರಸಾದದಲ್ಲಿ ಒಂದಗುಳು ಕೂಡ ಚೆಲ್ಲಬಾರದು, ಬಿಡಬಾರದು, ಕೊನೆಯಲ್ಲಿ ಖಂಡಿತ ಮಾಡಬೇಕು ಎಂದರೆ ಪ್ರಸಾದ ಬಟ್ಟಲಿಗೆ ನೀರು ಹಾಕಿಕೊಂಡು ಅದೂ ಕೂಡ ಚೆಲ್ಲದಂತೆ ಶುಭ್ರವಾಗುವಂತೆ ಕುಡಿಯಬೇಕು ಎಂಬುದಾಗಿ ಎಳೆಯ ಮಕ್ಕಳಿಗೆ ಹೇಳುವಂತೆ ನಿಷ್ಠುರವಾಗಿ ಹೇಳುತ್ತಿದ್ದರು. ಶಿವಾಚಾರ ಶುದ್ಧರಾದ ನಮ್ಮ ಗುರುಗಳು ಆಚಾರದಲ್ಲಿ ನ್ಯೂನತೆ ಕಂಡು ಬಂದರೆ ಎಂಥವರಾದರೂ, ಎಷ್ಟೇ ದೊಡ್ಡವರಾದರೂ, ಮಠಾಧಿಪತಿ ಗಳಾಗಿದ್ದರೂ ನೇರವಾಗಿ ಅಂದು ಬಿಡುತ್ತಿದ್ದರು. ಒಳಹೊರಗೆಲ್ಲ ಶುದ್ಧ ಆಚಾರ ನಿಷ್ಠರಾಗಿದ್ದರು'. ಕಿರಿಯರಾದರೇನು ಹಿರಿಯರಾದರೇನು ಅರಿವಿಗೆ ಹಿರಿದು ಕಿರಿದುಂಟೇ?' ಎಂಬ ಸ್ವಭಾವ ಅವರದಾಗಿತ್ತು. 'ಆಚಾರ ತನುಸಂಬಂಧವಾದಲ್ಲಿ ಶ್ರೀ ಗುರುಸನ್ನಿಹಿತ' ವೆನ್ನುವ 'ಗುರುಪಥ' ಶ್ರೀಗಳದಾಗಿತ್ತು.



## ಶ್ರೀ ಸಿದ್ಧಲಿಂಗೇಶ್ವರ ವಚನ

ದನುಜ ಮನುಜ ದಿವಿಜ ಲೋಕಭರಿತಂ
ಧರ್ಮಚರಿತಂ ದುರಿತದೂರಂ ವನದಿ ವಡಬ
ತೇಜೋಮಯಂ
ಪಂಚವಕ್ತ್ರಂ ಪ್ರಪಂಚುರಹಿತಂ ಪರಾತ್ಪರಂ
ಹರಹರಾ ಶಿವಾ ಶಿವಾ ಜಯ ಜಯ ಜಯತು
ಶರಣ ಕರುಣಾಕರ ತ್ರಾಹಿ ಮಾಂ ಭಕ್ತಿ ವತ್ಸಲ
ಮತ್ಪ್ರಾಣನಾಥ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಪ್ರಭುವಿಲ್ಲದ ಲೋಕವಿಲ್ಲ. ರಾಕ್ಷಸ, ಮಾನವ, ದೇವತೆಗಳ ಲೋಕದಲ್ಲೆಲ್ಲಾ ತುಂಬಿರುವ ಮಹಾಲಿಂಗಗುರು ಶಿವಸಿದ್ದೇಶ್ವರನು ಧರ್ಮಾಚರಣೆಯಲ್ಲಿ ನಿರತನು, ಪಾಪದೂರನು, ವಡಬಾಗ್ನಿ ತೇಜಃಪುಂಜನು, ಕರುಣಾಕರನು, ಭಕ್ತವತ್ಸಲನು, ತನ್ನ ಪ್ರಾಣವಲ್ಲಭನೂ ಆಗಿರುವೆ ಕಾಪಾಡು ಕಾಪಾಡು ಎಂದು ಎಡೆಯೂರು ಶ್ರೀ ಸಿದ್ಧಲಿಂಗೇಶ್ವರರು ಪ್ರಾರ್ಥಿಸುತ್ತಾರೆ.

(ಕೃಪೆ: ಸಂಕೀರ್ಣ ವಚನ ಸಂಪುಟ-6, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸದ್ವಿರದ ಕ್ರಾಂತಿಯ ನಡೆಸಿರುವ ಧೀಮಂತ
ಉದ್ಧಾರ ಶಿವಪಥವ ತೋರಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏರಲಾರೆವು ತಂದೆ ನೀನೇರಿದೆತ್ತರಕೆ
ಹಾಡಲಾರೆವು ಶಿವಗರುಡನೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭೂಮಿಯಾದೆ ತಂದೆ ಸಾವಿರ ಸಸಿಗಳಿಗೆ
ತುಂಬಿದ ತೊರೆಯಾದೆ ಮರೆಯಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಕ್ಷರವ ಕಲಿತೇನು ಬರೆದಲ್ಲದೆ ವಶವಿರದು
ಗುರುನಿಮ್ಮನರಿದೇನು ನೆನೆಯದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಠದೊಳಗೆ ನೀನಿಹೆಯೋ ನಿನ್ನೊಳಗೆ ಮಠವಿಹುದೋ
ನಾನರಿಯೆ ನೀನಿರುವ ಬೆಡಗನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹದ ಘನವ ಮರೆಯದಿರಲೆಂದು ಲೋಕ
ಘನಮಹಿಮ ಗುರು ನಿಮ್ಮ ಕರೆ ತಂದ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಮಾಡಿ ಮಾಟವ ಮರೆದೆ ಕೂಡಿ ಕೂಟವಮರೆದೆ
ಬಯಲ ಸಮರಸದೊಳು ಅರಳಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೋಪತಾಪವ ಕಳೆದು ಭ್ರಾಂತಿ ಭ್ರಮೆಯನು ಬಿಸುಟು
ಜಂಗಮ ಜಗಭರಿತನಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನೇನ ಕೊಡಲಿಲ್ಲ ನೀನೆನ್ನ ಬಿಡಲಿಲ್ಲ
ಯಾವ ಜನುಮದ ನಂಟು ನಾಕಾಣೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಯುಗದ ಉತ್ಸಾಹ'ವೆ ಜಗದಸಿರಿ ಎಚ್ಚರವೆ
ಶಿವಯೋಗಸಿರಿಯಾಭರಣವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಸಂನ್ಯಾಸದ ನಿಜಾರ್ಥ ತೋರಿದ ಗುರುಬಸವಣ್ಣನವರು

–ಯೋಗೀಶ್ ನಿರ್ವಿಕಲ್ಪ *

ಹುಟ್ಟು ಮತ್ತು ಸಾವುಗಳ ನಡುವಿನ ನಮ್ಮ ಬದುಕು ಅತ್ಯಂತ ಅಮೂಲ್ಯವಾದುದು. ಅಮೂಲ್ಯವಾದ ಬದುಕಿನ ಲೋಕ ವ್ಯವಹಾರದಲ್ಲಿ ನಾವು ಹೇಗೆ ವ್ಯವಹರಿಸಬೇಕು? ಬದುಕಿನಲ್ಲಿ ನಾವು ಕಾಣಬೇಕಾದ ಪರಮಸತ್ಯದ ಕಡೆಗೆ ಮನಸ್ಸನ್ನು ಹೇಗೆ ಕೇಂದ್ರೀಕರಿಸ ಬೇಕೆಂಬ ಬದುಕಿನ ಸಾರ್ಥಕತೆಯ ಪೂರ್ಣ ಪಾಠವನ್ನು ತಿಳಿಸಿದವರು ಗುರು ಬಸವಣ್ಣನವರು.



ನಮ್ಮ ಹುಟ್ಟಿನ ಹಿಂದಿನ ಸ್ಥಿತಿಯೇನು? ನಮ್ಮ ಸಾವಿನ ನಂತರ ಮುಂದಿನ ಗತಿಯೇನು? ಹುಟ್ಟು ಮತ್ತು ಸಾವುಗಳ ನಡುವಿನ ಬದುಕಿನ ಅರ್ಥವೇನು? ಎಂಬಂತಹ ನೂರಾರು ಪ್ರಶ್ನೆಗಳು ಒಮ್ಮೆಯಾದರೂ ನಮ್ಮ ಮನಸ್ಸನ್ನು ಕಾಡದೇ ಇರಲು ಸಾಧ್ಯವಿಲ್ಲ. ಹುಟ್ಟು ಮತ್ತು ಸಾವುಗಳ ನಡುವಿನ ನಮ್ಮ ಬದುಕು ಅಮೂಲ್ಯವಾಗಿದ್ದರೂ ಸಹ ನಾವಿಂದು ಅನಗತ್ಯ ಕಾರ್ಯಚಟುವಟಿಕೆಗಳಲ್ಲಿಯೇ ಕಾಲ ಕಳೆಯುತ್ತಿದ್ದೇವೆ. ಬದುಕಿನಲ್ಲಿ ಕಾಣಬೇಕಾದ ಪರಮಸತ್ಯವನ್ನು ಮರೆತು ಅಜ್ಞಾನದ ಹಾದಿಯಲ್ಲಿ ಬದುಕಿನ ಬಂಡಿಯನ್ನು ಸಾಗಿಸಿಕೊಂಡು ಬಂದಿದ್ದೇವೆ. ಲೋಕ ವ್ಯವಹಾರದ ಸಂತೆಯಲ್ಲಿರುವ ವಿಷಯ ವಸ್ತುವಿನೊಳಗಿನ ಆಸಕ್ತಿಯಿಂದ ಮನಸ್ಸು ಸಂಕುಚಿತಗೊಂಡಿದೆ. ಮನಸ್ಸಿಗೆ ಪ್ರತಿ ಕ್ಷಣಕ್ಷಣಕ್ಕೂ ಹೊಸ ಹೊಸ ಸವಾಲುಗಳು ಎದುರಾಗುತ್ತಲೇ ಇರುತ್ತದೆ. ಯಾವ ಕ್ಷಣದಲ್ಲಿ ನಮ್ಮ ಮನಸ್ಸು ವಿಷಯ ವಸ್ತುಗಳ ಮೋಹದ ಪಾಶಕ್ಕೆ ಒಳಗಾಗುತ್ತದೆ ಎಂಬುದು ಸ್ವತಃ ನಮಗೇ ತಿಳಿದಿರುವುದಿಲ್ಲ.

ಬದುಕಿನ ಸಂದಿಗ್ಧತೆಯ ಎಲ್ಲಾ ತಲ್ಲಣಗಳನ್ನು ಬಲ್ಲವರಾಗಿದ್ದ ಗುರು ಬಸವಣ್ಣನವರು ಹುಟ್ಟು-ಸಾವುಗಳ ನಡುವಿನ ಅಮೂಲ್ಯವಾದ ಇಹಲೋಕದ ಅರ್ಥಪೂರ್ಣ ಬದುಕಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದರು. ಹಿಂದಣ ಅಥವಾ ಮುಂದಣ ಜನ್ಮ ಯಾವುದಾದರೂ ಆಗಿರಲಿ ಅದರ ಕುರಿತು ಚಿಂತಾಕ್ರಾಂತರಾಗದೇ ಪ್ರಸ್ತುತ ಬದುಕಿನಲ್ಲಿ ನಾವು ಮಾಡಬೇಕಾದ ಕರ್ತವ್ಯವನ್ನು ಸಮರ್ಥವಾಗಿ ನಿರ್ವಹಿಸಲು ಅವರು ತಿಳಿಸಿದರು. ಮನಸ್ಸಿನ ಅತಿಯಾದ ಕಾಮಾದಿ ಬಯಕೆಗಳನ್ನು ಉದಾತ್ತೀಕರಿಸಿಕೊಳ್ಳುವ ಮತ್ತು ಪರಮಸತ್ಯ ತತ್ತ್ವದತ್ತ ನಮ್ಮ ಮನಸ್ಸನ್ನು ಕೇಂದ್ರೀಕರಿಸುವ ಸರಳ ಮತ್ತು ಸಹಜ ಮಾರ್ಗವನ್ನು ಇಷ್ಟಲಿಂಗ ಯೋಗಸೂತ್ರದ ಮೂಲಕ ಜಗಕ್ಕೆ ತೋರಿದ ಕೀರ್ತಿ ಅವರದು.

*ಮಾಡುವಂತಿರಬೇಕು, ಮಾಡದಂತಿರಬೇಕು*
*ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು*
*ನೋಡುವಂತಿರಬೇಕು, ನೋಡದಂತಿರಬೇಕು*
*ನೋಡುವ ನೋಟದೊಳಗೆ ತಾನಿಲ್ಲದಂತಿರಬೇಕು*
*ಕೂಡಲಸಂಗನ, ನೆನೆವುತ್ತ ನೆನೆವುತ್ತ ನೆನೆಯದಂತಿರಬೇಕು*

ಗುರುಬಸವಣ್ಣನವರ ದೃಷ್ಟಿಯಲ್ಲಿ ಸಂನ್ಯಾಸ ಎಂದರೆ ಸಾಂಸಾರಿಕ ಬದುಕಿನ ಪಲಾಯನವಾದವಾಗಿರಲಿಲ್ಲ. ಮನಸ್ಸಿನಲ್ಲಿ ಪರಮಾತ್ಮ ತತ್ತ್ವದೊಡನೆ ಒಂದು ಅವಿನಾಭಾವ ಸಂಬಂಧವನ್ನಿಟ್ಟುಕೊಂಡು ನಾವು ನಮ್ಮ ಕರ್ತವ್ಯಗಳನ್ನು ನಿರ್ವಂಚನೆಯಿಂದ ನಿರ್ವಹಿಸುವುದೇ ಸಂನ್ಯಾಸದ ನಿಜಾರ್ಥವಾಗಿತ್ತು.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-577 203.

ಯಾವೊಬ್ಬ ಸಂನ್ಯಾಸಿ ಅಥವಾ ಸಂಸಾರಿಯಾದರೂ ಸಹ ಲೋಕ ವ್ಯವಹಾರ ತ್ಯಜಿಸಿ ಬದುಕಲು ಸಾಧ್ಯವಿಲ್ಲ. ಯಾರು ಯಾವ ರೀತಿಯಲ್ಲಿ ಲೋಕ ವ್ಯವಹಾರದಲ್ಲಿ ವ್ಯವಹರಿಸುತ್ತಾರೆಂಬ ಆಧಾರದ ಮೇಲೆ ಸಂಸಾರಿ ಅಥವಾ ಸಂನ್ಯಾಸಿ ಎನಿಸಿಕೊಳ್ಳಲು ಸಾಧ್ಯ ಎನ್ನುವ ಅವರ ದೃಷ್ಟಿಯಲ್ಲಿ ವಿಷಯಾಸಕ್ತಿವುಳ್ಳ ಮನಸ್ಸಿನ ಮೋಹ ಪರವಶತೆಯೇ ಸಂಸಾರ. ಹಾಗೆಯೇ ವಿಷಯ ವಸ್ತುವಿನೊಳಗಿನ ಮನಸ್ಸಿನ ನಿರ್ಮೋಹತ್ವವೂ ಸಂನ್ಯಾಸ ಎನಿಸಿಕೊಂಡಿತ್ತು. ಆ ದೃಷ್ಟಿಯಲ್ಲಿ ಚಿಂತಿಸುವುದಾದರೆ ಗುರು ಬಸವಣ್ಣನವರು ಒಬ್ಬ ಶ್ರೇಷ್ಠ ಸನ್ಯಾಸಿ ಎನಿಸಿಕೊಂಡಿದ್ದರು. ಬಿಜ್ಜಳ ರಾಜನ ಆಸ್ಥಾನದಲ್ಲಿ ಮಹಾಮಂತ್ರಿಯಾಗಿ ಹಾಗೂ ಸಾಂಸಾರಿಕ ಬದುಕಿನಲ್ಲಿ ಇದ್ದುಕೊಂಡು ಅವರು ಸಾಮಾಜಿಕ-ಧಾರ್ಮಿಕ-ಆಧ್ಯಾತ್ಮಿಕ ಹಾಗೂ ರಾಜಕೀಯ ಕ್ಷೇತ್ರಗಳಿಗೆ ಅಪಾರ ಸೇವೆ ಸಲ್ಲಿಸಿದರು. ಲೋಕ ವ್ಯವಹಾರ ದೊಳಗಿದ್ದುಕೊಂಡು, ಅದರಿಂದ ಉಂಟಾಗುವ ಪರಿಣಾಮಕ್ಕೆ ಮನಸ್ಸು ವಿಚಲಿತಗೊಳ್ಳದಂತೆ ಸಮಾಧಾನ ವಾಗಿಟ್ಟುಕೊಳ್ಳುವ ಯೋಗದ ನಿರ್ಭಾವ ಸ್ಥಿತಿಯಲ್ಲಿ ಅವರು ತಮ್ಮ ಬಾಳ ಕರ್ತವ್ಯವನ್ನು ಅರ್ಥಪೂರ್ಣವಾಗಿ ನಿರ್ವಹಿಸಿದರು.

ನಿಸ್ವಾರ್ಥ ಬುದ್ಧಿಯಿಂದ ಮಾಡುವ ಪ್ರತಿಯೊಂದು ಕೆಲಸ ಕಾರ್ಯಗಳೂ ಸಹ ಭಗವಂತನ ಪೂಜೆ ಇದ್ದಂತೆ ಎಂದು ಅರ್ಥೈಸುವ ಅವರು ನಾ ಮಾಡಿದೆ, ನನ್ನಿಂದಲೇ ಎಲ್ಲಾ ಎಂಬಂತಹ ಅಹಂಭಾವ(ಕರ್ತೃತ್ವ ಭಾವ) ನಮ್ಮಲ್ಲಿ ಇರಬಾರದೆಂದು ತಿಳಿಸಿದರು. ಯಾವಾಗ ನಾನೆಂಬ ಅಹಂಭಾವ ನಮ್ಮಲ್ಲಿ ಅಂಕುರಿಸುತ್ತದೆಯೋ ಆ ಕ್ಷಣ ದಿಂದಲೇ ನಮ್ಮ ವಿನಾಶ ಪ್ರಾರಂಭವಾಗುತ್ತದೆ ಎನ್ನುವ ಅವರು ಲೋಕ ವ್ಯವಹಾರದೊಳಗಿನ ಯಾವುದೇ ವಿಷಮ ಪರಿಸ್ಥಿತಿಯಲ್ಲಿಯೂ ತಮ್ಮ ಮನಃಶಾಂತಿಯನ್ನು ಕಳೆದು ಕೊಂಡವರಲ್ಲ. ಬದುಕಿನ ಪ್ರತಿಯೊಂದು ಕಾರ್ಯವನ್ನೂ ಒಂದು ಯೋಗದಂತೆ ಅಂದರೆ ಪರಿಣಾಮ ರಹಿತ ಹಾಗೂ ಆನಂದಸಹಿತವಾಗಿ ಅವರು ನಿರ್ವಹಿಸಿದರು.

*ಅರಿಯಲಿಲ್ಲದ ಅರಿವು ಅವಗ್ರಹಿಸಿತ್ತಾಗಿ*
*ಅರಿಯಲಿಲ್ಲದ ಮರೆಯಲಿಲ್ಲದ ನಿಜವು ನಿಂದಿತ್ತಾಗಿ*
*ನಿರ್ನಾಮವಾಯಿತು, ನಿಃಪತ್ತಿಯಾಗಿತ್ತು*
*ಅಗಮ್ಯದಲ್ಲಿ ಗಮನ ಕೆಟ್ಟಿತ್ತು, ನಿಂದಲ್ಲಿ ನಿರಾಳವಾಯಿತು*
*ಕೂಡಲಸಂಗಮನಲ್ಲಿ ಶಬ್ದ ಮುಗ್ಧವಾಯಿತ್ತು.*

ಬದುಕಿನಲ್ಲಿ ನಾವು ಕಾಣಬೇಕಾದ ಪರಮಸತ್ಯವನ್ನು ನಮ್ಮ ಮನಸ್ಸಿನ ಮೂರು ಅವಸ್ಥೆಗಳಾದ ಜಾಗೃ-ಸ್ವಪ್ನ-ಸುಷುಪ್ತಿಗಳಲ್ಲಿಯೂ ನೆನೆಯಬೇಕು. ನಮ್ಮ ಮನದ ಒಳ ಹೊರಗೂ ಸದಾ ಪರಮಾತ್ಮನ ಅನನ್ಯ ಚಿಂತನೆ ಸಾಗಬೇಕು. ಇಷ್ಟಲಿಂಗ ತ್ರಾಟಕ ಯೋಗದಲ್ಲಿ ಮನಸ್ಸು ತನ್ಮಯಗೊಳ್ಳುವುದರ ಮೂಲಕ ತನ್ನೆಲ್ಲಾ ಚಿತ್ತ ವೃತ್ತಿಗಳನ್ನು ಕಳೆದುಕೊಂಡಾಗ ಪರಮಾತ್ಮ ತತ್ತ್ವದರಿವು ಸಾಧ್ಯ ಎಂಬ ಸಂದೇಶ ಅವರದು. ನಾವು ನಮ್ಮ ಬದುಕಿನಲ್ಲಿ ಏನನ್ನಾದರೂ ಸಾಧಿಸಬಹುದು. ಆದರೆ ನಾ ಯಾರೆಂಬ ನಿಜಜ್ಞಾನದರಿವು ಸಾಧಿಸುವುದು ಮಾತ್ರ ಕಷ್ಟಸಾಧ್ಯವಾಗಿದ್ದು, ಅದನ್ನು ಕಾಣುವುದೇ ಬದುಕಿನ ನಿಜವಾದ ಸಾರ್ಥಕತೆಯ ಸಾಧನೆಯಾಗಿದೆ. ಇಡೀ ವಿಶ್ವವನ್ನು ಒಂದು ಯೋಗ ಸೂತ್ರದಡಿಯಲ್ಲಿ ಬಂಧಿಸಿ ತನ್ನ ನಿರ್ದೇಶನದಂತೆ ನಡೆಸುತ್ತಿರುವ ಪರಮಾತ್ಮ ತತ್ತ್ವದ ಅಗಮ್ಯ ಶಕ್ತಿಯಲ್ಲಿ ನಮ್ಮ ಚಿತ್ತವೃತ್ತಿಯ ಭಾವಗಳು ನಿರ್ಭಾವ ವಾಗಿ ನಿಃಪತ್ತಿ ಹೊಂದಿದಾಗ ಕಾಣುವುದೇ ನಿಜ ಲಿಂಗೈಕ್ಯ ಸ್ಥಿತಿಯಾಗಿದೆ. ಆ ದಿವ್ಯ ಉದ್ದೇಶದತ್ತ ಕರೆದೊಯ್ಯುವ ಆಶಯ ಗುರು ಬಸವಣ್ಣನವರು ಪ್ರತಿಪಾದಿಸಿದ ಇಷ್ಟಲಿಂಗ ಯೋಗಸೂತ್ರದಲ್ಲಿ ಅಡಗಿರುವುದನ್ನು ನಾವು ಕಾಣಬಹುದು.

ಗುರು ಬಸವಣ್ಣನವರು ಬದುಕನ್ನು ಒಂದು ಯೋಗದಂತೆ ಕಂಡವರು. ಅವರು ತಮ್ಮೆಲ್ಲಾ ಕೆಲಸ ಕಾರ್ಯಗಳನ್ನು ನಿರ್ಲಿಪ್ತರಾಗಿ ನಿರ್ವಹಿಸಿದರು. ಅದರೊಳಗೆಯೇ ಅವರು ಪರಮಾತ್ಮ ತತ್ತ್ವದ ಆನಂದವನ್ನು ಸಹ ಕಂಡರು. ಸಾರ್ಥಕ ಬದುಕಿಗೆ ಅಗತ್ಯವಾದ ಸಂಸ್ಕಾರ ಶಿಕ್ಷಣವನ್ನು ಅವರು ಎಲ್ಲರಿಗೂ ನೀಡಿದರು. ಭಕ್ತಿ ಪಂಜರ(ಪಥ)ದ ಮೂಲಕ ಅವರು ಎಲ್ಲರನ್ನು ಬಂಧಿಸಿದ್ದು ಒಂದು ವಿಶೇಷ ಸಂಗತಿ.

ಅವರು ಈ ಇಳೆಯ ಸಾರ್ಥಕ ಬದುಕನ್ನು ಪೂರೈಸಿ ಇಷ್ಟಲಿಂಗ ತ್ರಾಟಕ ಯೋಗದ ಮೂಲಕ ಪರಮಾತ್ಮ ತತ್ತ್ವದ ಜ್ಞಾನ ಬೆಳಕಿನಲ್ಲಿ ಲಿಂಗೈಕ್ಯಗೊಂಡ ಶ್ರಾವಣ ಶುದ್ಧ ಪಂಚಮಿಯ ದಿನವನ್ನು ಬಸವ ಪಂಚಮಿ ಎಂದು ರಾಷ್ಟ್ರಾದ್ಯಂತ ಆಚರಿಸಿಕೊಂಡು ಬರಲಾಗುತ್ತಿದೆ. ೮೧೬ನೇ ಲಿಂಗೈಕ್ಯ ಸಂಸ್ಮರಣೆಯ (ಬಸವಪಂಚಮಿ) ಆಚರಣೆಯ ಸಂದರ್ಭದಲ್ಲಿ ನಾವುಗಳು ಅವರು ತೋರಿದ ಸಂದೇಶದ ಮಾರ್ಗದಲ್ಲಿ ಸಾಗಬೇಕು. ಹಾಗೆಯೇ ಪರಮಾತ್ಮ ತತ್ತ್ವದರಿವನ್ನು ಕಾಣುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು.







# ಅರ್ಥ ಶೌಚ ಶ್ರೇಷ್ಠ

-ನ್ಯಾಯಮೂರ್ತಿ ಡಾ. ಮ. ರಾಮಾ ಜೋಯಿಸ್ *

***ಸರ್ವೇಷಾಮೇವ ಶೌಚಾನಾಂ ಅರ್ಥಶೌಚಂ ಪರಂ ಸ್ಮೃತಂ***
***ಯೋऽರ್ಥೇ ಶುಚಿರ್ಹಿ ಸ ಶುಚಿರ್ನಮೃದ್ವಾರಿ ಶುಚಿಃ ಶುಚಿಃ ।***

ಎಲ್ಲ ಬಗೆಯ ಶುದ್ಧಿಗಳಿಗಿಂತಲೂ 'ಅರ್ಥಶೌಚ' ಶ್ರೇಷ್ಠ ಅಂದರೆ ಹಣಕಾಸಿನ ವ್ಯವಹಾರದಲ್ಲಿ ಪ್ರಾಮಾಣಿಕನಾಗಿರುವುದು. ಯಾರು ಹಣಕಾಸಿನ ವಿಷಯದಲ್ಲಿ ಶುಚಿಯಾಗಿಲ್ಲವೋ ಅವನು ನಿತ್ಯ ಸ್ನಾನ ಮಾಡಿದರೂ ಶುಚಿಯಾಗಿರುವುದಿಲ್ಲ. (ಮನುಸ್ಮೃತಿ ೫-೧೦೬)

ಇದೊಂದು ಅತಿ ಮಹತ್ವಪೂರ್ಣ ಮತ್ತು ಇಂದಿನ ಪರಿಸ್ಥಿತಿಯಲ್ಲಿ ಅತ್ಯವಶ್ಯಕವಾದ ಮಾರ್ಗದರ್ಶನ ಮತ್ತು ಎಚ್ಚರಿಕೆ. ಮುಖ್ಯವಾಗಿ ಮಂತ್ರಿಗಳ, ರಾಜಕೀಯ ಅಧಿಕಾರ ಸ್ಥಾನ ಪಡೆದಿರುವವರ, ಸರ್ಕಾರದ ಅಥವಾ ಖಾಸಗಿ ಮಾಲೀಕರ, ಅಧಿಕಾರಿಗಳ ಮತ್ತು ನೌಕರರ ಕೈ ಶುದ್ಧವಿರಬೇಕು. ಕೈ ಶುದ್ಧವಿಲ್ಲದೆ ಎಷ್ಟು ಸ್ನಾನ ಮಾಡಿದರೂ ವ್ಯಕ್ತಿ ಶುದ್ಧವಾಗುವುದಿಲ್ಲ. ಕೊಳೆಯ ವಾಸನೆ ಹೋಗುವುದಿಲ್ಲ.

ಸ್ವಾತಂತ್ರ್ಯನಂತರ ಪ್ರಜೆಗಳ ಕೈಗೆ ಅಧಿಕಾರ ಬಂದು ಆರು ದಶಕಗಳಾದವು. ಪರಕೀಯರ ಆಡಳಿತದಲ್ಲಿ ಶೋಷಣೆ, ಅಧಿಕಾರ ದುರುಪಯೋಗ ಆಗುತ್ತಿತ್ತು. ಪ್ರಜೆಗಳ ಪ್ರತಿನಿಧಿಗಳ ಕೈಗೆ ಅಧಿಕಾರ ಬಂದ ಕೂಡಲೇ ಸುಭದ್ರ, ಪ್ರಾಮಾಣಿಕ, ದಕ್ಷ ಸರ್ಕಾರ ಸ್ಥಾಪನೆಯಾಗಿ ದೇಶದಲ್ಲಿ ಸುಖ ಶಾಂತಿ ಕಾಣುತ್ತೇವೆ ಎಂಬ ಆಸೆ ಈಗ ನುಚ್ಚು ನೂರಾಗಿದೆ. ಸರ್ವಾಂಗೀಣವಾಗಿ ರಾಷ್ಟ್ರ ಪ್ರಗತಿ ಸಾಧಿಸಿದ್ದರೂ ಲಂಚಕೋರತನ, ಭ್ರಷ್ಟಾಚಾರ, ಹಣಕ್ಕಾಗಿ ಅಧಿಕಾರ ದುರುಪಯೋಗ ಪರಮಾವಧಿಯನ್ನು ಮುಟ್ಟಿದೆ. ಮುಖ್ಯವಾಗಿ ಸರ್ಕಾರ ನಡೆಸುವ ಮಂತ್ರಿಗಳು ಹಾಗೂ ಅಧಿಕಾರಿಗಳಲ್ಲಿ ಬಹುಪಾಲು ಜನರಿಗೆ ಅರ್ಥ, ಶೌಚವಿಲ್ಲ. ಹಣದ ವಿಷಯದಲ್ಲಿ ಕೈ ಬಾಯಿ ಶುದ್ಧವಿಲ್ಲದವರಿಂದ ಪ್ರಾಮಾಣಿಕ ಆಡಳಿತ ಅಸಾಧ್ಯ. ಅಧಿಕಾರ ಸಿಕ್ಕಾಗ, ಅವಕಾಶ ಬಂದಾಗ ಜನಸೇವೆ ಮಾಡಬಾರದೇ? ಎಂದು ಹೇಳಬೇಕಾದ ಪರಿಸ್ಥಿತಿ ಒದಗಿದೆ ಅಂದರೆ ನೀವು ಮಾನ ಕಳೆದುಕೊಂಡು, ಜನತೆಗೂ ಮೋಸ ಮಾಡಬೇಡಿ ಎಂಬ ಸೂಚನೆ ಇಲ್ಲಿದೆ. ಇದಕ್ಕೆ ಮೂಲ ಕಾರಣ 'ಅರ್ಥ ಶೌಚ'ದ ಅಭಾವ. ಇದೊಂದನ್ನು ಸರಿಪಡಿಸಿಕೊಂಡರೆ, ನಿಜಕ್ಕೂ ನಮ್ಮ ಸಂಸ್ಕೃತಿಯ ಶ್ರೀಮಂತಿಕೆಯಾದ ಮಾನವೀಯತ್ವ, ಮಾನವೀಯ ಮೌಲ್ಯಗಳ ಕಾರಣದಿಂದ ಜಗತ್ತಿನಲ್ಲೇ ಶ್ರೇಷ್ಠವಾದ ದೇಶವಾಗುವುದರಲ್ಲಿ ಸಂದೇಹವಿಲ್ಲ.

ಮನುಸ್ಮೃತಿಯಲ್ಲಿ ಘೋಷಿಸಿರುವ ಐದು ನಿಯಮಗಳಲ್ಲಿ 'ಶೌಚಂ' ಅಂದರೆ, ಎಲ್ಲ ವಿಷಯಗಳಲ್ಲಿ ಶುಚಿಯಾಗಿರುವುದು ಒಂದು ಮಹತ್ವಪೂರ್ಣ ನಿಯಮ. ಮನುಷ್ಯ ಜೀವನದ ಪ್ರತಿಯೊಂದು ಚಟುವಟಿಕೆಯಲ್ಲಿ ಶುಚಿಯಾಗಿರಬೇಕು, ಮಲಿನವಾಗಿರಬಾರದು ಎಂಬುದೇ ಈ ನಿರ್ದೇಶನದ ಅರ್ಥ. ಆದರೆ, ವಿಶ್ವಾದ್ಯಂತ ಅದರಲ್ಲೂ ಸ್ವತಂತ್ರ ಭಾರತದಲ್ಲಿ ಹಣಕಾಸಿನ ಬಗ್ಗೆ ಶುಚಿತ್ವದ ಅಭಾವ ಉಂಟಾಗಿ ಪರಿಸ್ಥಿತಿ ಭಯಾನಕವಾಗಿದೆ.

ಲಂಚಕೋರತನ, ಸರ್ಕಾರದ ಅಥವಾ ಇತರರಿಗೆ ಸೇರಿದ ಹಣವನ್ನು ದುರುಪಯೋಗಪಡಿಸಿಕೊಳ್ಳುವುದು ಸರ್ವೇ ಸಾಮಾನ್ಯವಾಗಿದೆ. ಕೆಲವು ವರ್ಷಗಳ ಹಿಂದೆ ನಡೆದ ಭೋಫರ್ಸ್ ಹಗರಣ, ಇತ್ತೀಚೆಗೆ ನಡೆದಿರುವ ಕಾಮನ್‌ವೆಲ್ತ್ ಆಟದ ಹಗರಣ, ಸ್ಪೆಕ್ಟ್ರಂ ೨-ಜಿ ಹಗರಣ ಇವುಗಳಲ್ಲಿ ಲಕ್ಷಾಂತರ ಕೋಟಿ ರೂಗಳ ಸಾರ್ವಜನಿಕ ಹಣದ ಲೂಟಿಯಾಗಿ ಇದರಿಂದ ರಾಷ್ಟ್ರದ ಭದ್ರತೆಯನ್ನೇ ಅಲುಗಿಸುವಂತಹವುಗಳಾಗಿವೆ. ಸರ್ಕಾರದ ಹಣವನ್ನು ರಕ್ಷಿಸಬೇಕಾದ ಜವಾಬ್ದಾರಿ ಹೊಂದಿರುವವರೇ ಇಂತಹ ಹಗರಣಗಳನ್ನು ಮಾಡುತ್ತಿರುವುದು 'ಬೇಲಿಯೇ ಹೊಲವಂ ಮೆಯ್ದೊಡೆ' ಆಗುವ ದುಷ್ಪರಿಣಾಮವನ್ನು ಸೋಮೇಶ್ವರ ಕವಿ ಚಿತ್ರಿಸಿರುವ ಪರಿಸ್ಥಿತಿಯ ಅನುಭವ ನಮಗಾಗುತ್ತಿದೆ.

ಎಲ್ಲಿಯವರೆಗೆ 'ಅರ್ಥಶೌಚ;ಕ್ಕೆ ಮೊದಲ ಸ್ಥಾನ ನೀಡಲಾಗುವುದಿಲ್ಲವೋ, ಬರೀ ಬಾಯಿಮಾತಿನಿಂದ ನೈತಿಕತೆ ಅಸಾಧ್ಯ. ಇಂದು 'ಅರ್ಥಶೌಚ'ವಿಲ್ಲದ ಅನೇಕರ ಕೈಗೆ ಅಧಿಕಾರ ಹೋಗಿರುವುದು ರಾಷ್ಟ್ರದ ದುರ್ದೈವ. ರಾಜಕೀಯ ನಾಯಕರು ಲಂಚದ ಬಗ್ಗೆ ತಮ್ಮ ಧೋರಣೆ 'Zero tolerance' ಎಂದು ಭಾಷಣ, ಘೋಷಣೆ ಮಾಡುತ್ತಿದ್ದರೂ ವಸ್ತುಸ್ಥಿತಿಯೆಂದರೆ ಲಂಚ ನಿರೋಧಕ್ಕೆ Zero tolerance ಆಗಿರುವುದು ಸತ್ಯಸಂಗತಿ. ಲಂಚ ತೆಗೆದುಕೊಳ್ಳುವ ಮತ್ತು ಸರ್ಕಾರಿ ಹಣದ ದುರುಪಯೋಗಮಾಡುವ ವಿಷಪೂರಿತ ವ್ಯಕ್ತಿಗಳಿಂದ ಅಮೃತವನ್ನು ಅಪೇಕ್ಷಿಸಲು ಸಾಧ್ಯವಿಲ್ಲ. ಯಾರು ಅದರ ಭಾಗವಾಗಿ ಮರ್ಯಾದೆ ಕಳೆದುಕೊಳ್ಳಬೇಡಿ, ಇದೇ ಮೇಲೆ ಹೇಳಿದ ಶ್ಲೋಕದ ಮಾರ್ಗದರ್ಶನ.

* ಮಾಜಿ ಮುಖ್ಯ ನ್ಯಾಯಾಧೀಶರು ಹಾಗೂ ಮಾಜಿ ರಾಜ್ಯಪಾಲರು, ಬೆಂಗಳೂರು.

## ಸಂತಾಪ



ವೀರಶೈವ ಧರ್ಮ ಜಗತ್ತಿನ ಪಂಚಪೀಠಗಳಲ್ಲೊಂದಾದ ಉಜ್ಜಯಿನಿ ಜಗದ್ಗುರು ಶ್ರೀ ಮರುಳಸಿದ್ಧೇಶ್ವರ ಮಹಾ ಪೀಠದ ಅಧ್ಯಕ್ಷರಾಗಿ ಭಕ್ತರ ಆರಾಧ್ಯ ಗುರುಮೂರ್ತಿಗಳೆನಿಸಿದ್ದ ಜಗದ್ಗುರು ಶ್ರೀ ಶ್ರೀ ಮರುಳಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳು ದಿನಾಂಕ ೧೭-೧೦-೨೦೧೧ರ ಸೋಮವಾರದಂದು ಲಿಂಗೈಕ್ಯರಾದುದನ್ನು ತಿಳಿದು ಅತೀವ ದುಃಖವಾಯಿತು. ಭಕ್ತ ಜಗತ್ತಿಗೆ ತುಂಬಲಾರದ ನಷ್ಟವಾಯಿತು. ಶ್ರೀಗಳವರು ವಿನಯ ಸೌಜನ್ಯಗಳ ಪ್ರತಿರೂಪವಾಗಿದ್ದರು. ಭಕ್ತಲೋಕದ ಶಾಂತಸೂರ್ಯರಾಗಿ ಬೆಳಗುತ್ತಿದ್ದರು. ತ್ಯಾಗಮೂರ್ತಿಗಳಾಗಿ ಲೋಕಕಲ್ಯಾಣದಲ್ಲಿ ಆತ್ಮಕಲ್ಯಾಣವನ್ನು ಕಾಣುತ್ತಿದ್ದ ಪೀಠಪರಂಪರೆಯ ಘನತೆಗೌರವಗಳನ್ನು ಸಂರಕ್ಷಿಸಿಕೊಂಡು ಬಂದವರಾಗಿದ್ದರು. ಗುರುಲಿಂಗ ಜಂಗಮವನ್ನು ಏಕೋಭಾವದಿಂದ ಕಾಣುತ್ತಿದ್ದ ಜ್ಞಾನಘನರಾಗಿದ್ದರು. ತಮ್ಮ ವಿದ್ಯಾಭ್ಯಾಸದ ಕೆಲವು ದಿನಗಳು ನಮ್ಮ ಮಠದಲ್ಲಿದ್ದುಕೊಂಡು ವ್ಯಕ್ತಿತ್ವ ವಿಕಾಸದ 'ಶಿವಪಥ'ವನ್ನು ಗುರುತಿಸಿಕೊಂಡವರಾಗಿದ್ದುದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತ, ಲಿಂಗದೊಳಗಾಗಿರುವ ಶ್ರೀಗಳವರು ತಮ್ಮ ಕಾರುಣ್ಯ ಕಿರಣಗಳನ್ನು ಭಕ್ತ ಜಗತ್ತಿನ ಮೇಲೆ ಸದಾ ಅನುಗ್ರಹಿಸುತ್ತಿರಲಿ ಎಂದು ಆಶಿಸುತ್ತ ಶ್ರೀ ಉಜ್ಜಯಿನಿ ಪೀಠವನ್ನು ಆಶೀರ್ವದಿಸುತ್ತಿರಲಿ, ಶ್ರೀಗಳವರ ಆತ್ಮ ಚಿರಶಾಂತಿಯನ್ನು ಪಡೆಯಲಿ ಎಂದು ಹಾರೈಸುತ್ತೇವೆ.

(ಶ್ರೀ ಶಿವಕುಮಾರಸ್ವಾಮಿಗಳು)
ಶ್ರೀ ಸಿದ್ಧಗಂಗಾಮಠ

## ಸಂತಾಪ



ವೀರಶೈವ ಧರ್ಮ ಜಗತ್ತಿನ ಆಚಾರ್ಯಪೀಠಗಳಲ್ಲಿ ಒಂದಾದ ಶ್ರೀಶೈಲಪೀಠದ ಧರ್ಮಾಧ್ಯಕ್ಷರಾಗಿ ಭಕ್ತ ಸಮುದಾಯದ ಆರಾಧ್ಯಮೂರ್ತಿಗಳಾಗಿದ ಜಗದ್ಗುರು ಶ್ರೀ ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ದಿನಾಂಕ ೨೯-೧೦-೨೦೧೧ರ ಶನಿವಾರದಂದು ಲಿಂಗೈಕ್ಯ ರಾದುದನ್ನು ತಿಳಿದು ಅಪಾರ ದುಃಖ ವಾಯಿತು. ಸಮಾಜಕ್ಕೆ ತುಂಬಲಾರದ ನಷ್ಟವಾಯಿತು.

ಘನ ವಿದ್ವಾಂಸರೂ, ಸಹನಾಘನರೂ, ಭಕ್ತವತ್ಸಲರೂ ವಿರಕ್ತಗುರುಮಠಗಳ ಬಗ್ಗೆ ಅಭಿಮಾನ ಧನರೂ ಆಗಿದ್ದ ಶ್ರೀಗಳವರು ಶ್ರೀಶೈಲಪೀಠದ ಸುವರ್ಣ ಜ್ಯೋತಿಯಾಗಿ ಪ್ರಕಾಶಿಸಿದ್ದರು. ಪಾರದರ್ಶಕ ವ್ಯಕ್ತಿತ್ವಕ್ಕೆ ಹೆಸರಾಗಿದ್ದ ಶ್ರೀಗಳವರು ಆಚಾರ್ಯ ಪೀಠದಲ್ಲಿ ಬದಲಾವಣೆಯ ಹೊಸಮಾರ್ಗಕ್ಕೆ ಶ್ರೀಕಾರ ಹಾಕಿದವರಾಗಿದ್ದರು.

ಶ್ರೀಗಳವರು ಶ್ರೀಮಠಕ್ಕೆ ಪಂಚಪೀಠಾಧೀಶರ ಜೊತೆ ಯಲ್ಲಿ ಭೇಟಿಕೊಟ್ಟಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತ ಶ್ರೀಗಳವರ ಆತ್ಮ ಮಹಾಲಿಂಗದಲ್ಲಿದ್ದುಕೊಂಡೇ ಭಕ್ತಾದಿಗಳನ್ನು ಸದಾಕಾಲ ಆಶೀರ್ವದಿಸುತ್ತಿರಲಿ ಎಂದು ಆಶಿಸುತ್ತ, ಚಿರಶಾಂತಿಯನ್ನು ಪಡೆಯಲಿ ಎಂದು ಹಾರೈಸುತ್ತೇವೆ.

(ಶ್ರೀ ಶಿವಕುಮಾರಸ್ವಾಮಿಗಳು)
ಶ್ರೀ ಸಿದ್ಧಗಂಗಾಮಠ





ಶ್ರೀಕೃಷ್ಣನನ್ನೂ, ಕೃಷ್ಣದೇವರಾಯನನ್ನು ಸಮೀಕರಿಸಿದ್ದಾರೆ.

'ನಳಚರಿತ್ರೆ' ಖಂಡಕಾವ್ಯವಾಗಿದ್ದು ೯ ಸಂಧಿಗಳು, ೪೮೧ ಭಾಮಿನಿ ಷಟ್ಪದಿಗಳನ್ನು ಒಳಗೊಂಡಿದೆ. ನಳ-ದಮಯಂತಿ ಕಥೆಯನ್ನು ಮಹಾಭಾರತ ಚೌಕಟ್ಟಿನಲ್ಲಿ ಕೂಡ್ರಿಸಲಾಗಿದೆ. ಪರಿಶುದ್ಧ ಆದರ್ಶ ಪ್ರೇಮ ಹೇಗೆ ಎಲ್ಲ ದುಃಖ ಗಳನ್ನು ಮೀರಿ ತನ್ನ ಗುರಿ ಸಾಧಿಸುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ ಇದೊಂದು ಪ್ರೇಮಕಾವ್ಯ.

'ರಾಮಧಾನ್ಯ ಚರಿತ್ರೆ' ಸಂಕ್ಷಿಪ್ತ ಸುಂದರ ಕಾವ್ಯ ೧೧೫೮ ಭಾಮಿನಿ ಷಟ್ಪದಿಯ ಇದನ್ನು ಖಂಡಕಾವ್ಯ ಎಂದೂ ಕರೆಯಬಹುದು. ಒಂದು ರಾಮನ ಕಥೆ ಇನ್ನೊಂದು ಭತ್ತ-ರಾಗಿಗಳ ನಡುವಿನ ಸ್ಪರ್ಧೆಯನ್ನು ಚಿತ್ರಿಸಿ ರಾಗಿಯ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತದೆ. ರೂಪಕ ತಂತ್ರದ ಈ ಕಾವ್ಯ ಸಂಕ್ಷಿಪ್ತ ರಾಮಾಯಣವನ್ನು ಚಿತ್ರಿಸುತ್ತದೆ. ಭತ್ತ-ರಾಗಿ ರೂಪಕ ಕನಕದಾಸರ ಕಲ್ಪನೆ, ಭತ್ತ ಮೇಲ್ವರ್ಗದವರ ಆಹಾರ ರಾಗಿ ಕೆಳವರ್ಗದವರ ಆಹಾರ. ಈ ವರ್ಗ ಸಂಘರ್ಷವನ್ನು ಈ ಸಂಕೇತಗಳ ಮೂಲಕ ಹೇಳಿ ರಾಗಿಯ ಮಹತ್ವವನ್ನು ಸಂಕೇತಿಸಿ ತುಳಿತಕ್ಕೆ ಒಳಗಾದವರನ್ನು ಮೇಲೆತ್ತಿ ಅವರಿಗೆ ಘನತೆ ಕೊಡಲು ಪ್ರಯತ್ನಿಸಿದರು.'ಹರಿಭಕ್ತಿಸಾರ' ೧೧೦ ನುಡಿಗಳಲ್ಲಿ ಶತಕ ಛಂದಸ್ಸಿನಲ್ಲಿ ರಚಿತವಾಗಿದೆ. ಇದರಲ್ಲಿ ಎರಡು ವರ್ಣನೆಗಳಿವೆ. ಒಂದು ಶ್ರೀಹರಿಯ ಪೌರಾಣಿಕ ಅವತಾರದಲ್ಲಿ ಎಸಗಿದ ಕೃತ್ಯಗಳು ಎರಡು ಆತ್ಮ, ಜಗತ್ತು ಮತ್ತು ದೇವರು. ಮಾನವನ ಆಧ್ಯಾತ್ಮಿಕ ಮುಕ್ತಿಗೆ ಅವಶ್ಯವಾಗಿರುವ ದೇವಕೃಪೆಯನ್ನು ಕುರಿತು ತಾತ್ವಿಕ ಚಿಂತನೆಗಳು.

ಕನಕದಾಸರು ಅನೇಕ 'ಮುಂಡಿಗೆ'ಗಳನ್ನು ರಚಿಸಿ ಮುಂಡಿಗೆ ಕಾವ್ಯ ಪ್ರಕಾರದ ಜನಕರಾಗಿದ್ದಾರೆ. ಇವು ಶರಣರ ಬೆಡಗಿನ ವಚನಗಳನ್ನು ನೆನಪಿಸುತ್ತವೆ. ಮುಂಡಿಗೆ ಎಂದರೆ ಕಟ್ಟಿಗೆ ದಿಮ್ಮಿ. ಆದರೆ ಇಲ್ಲಿ ಮುಂಡಿಗೆ ಎಂದರೆ ಒಗಟಿನ ರೂಪದ ಕಾವ್ಯ. ಅರ್ಥವನ್ನು ಪಂಡಿತರೇ ಒಡೆಯಬೇಕು. ಕನಕದಾಸರು ಎರಡು ಪ್ರಕಾರದ ಮುಂಡಿಗೆ ಗಳನ್ನು ರಚಿಸಿದ್ದಾರೆ. ೧) ಪೌರಾಣಿಕ ವಸ್ತುಗಳನ್ನು ಚಿತ್ರಿಸುವ ೨) ಅನುಭಾವದ ಮುಂಡಿಗೆಗಳು. ಈ ಮುಂಡಿಗೆ ವಿಷಯದಲ್ಲಿ 'ಕನಕನನ್ನು ಕೆಣಕಬೇಡ, ಕೆಣಕಿ ತಿಣುಕಬೇಡ' ಎಂಬ ಮಾತಿದೆ ಇಲ್ಲಿ ತಮ್ಮನ್ನು ಶ್ರೀ ಹರಿಯ ಆಧ್ಯಾತ್ಮಿಕ ಸತಿ ಎಂದು ಪರಿಗಣಿಸಿ-ಬೊಟ್ಟ ಮೊಲಯ ತಮ್ಮನ್ನು ಪತಿಯಾದ ರಂಗಯ್ಯ ಪ್ರೀತಿಸುವುದಿಲ್ಲವೆಂದು ನಗೆಯಾಡು ತ್ತಾರೆ. (ರಂಗಯ್ಯ ಬೇರೆ ಗೋಪಿಕೆಯನ್ನು ಪ್ರೀತಿಸುವುದರಿಂದ) ಪ್ರಸಿದ್ಧ ಮುಂಡಿಗೆ ಎಂದರೆ 'ಬಯಲು ಬಯಲು ಆಲಯ ದೊಳಗೋ! ಆಲಯವು ಬಯಲೊಳಗೋ। ಬಯಲು ಆಲಯವೆರಡು ನಯನ ದೊಳಗೋ। ನಯನ ಬುದ್ಧಿಗಳೆರಡು ನನ್ನೊಳಗೋ ಹರಿಯೇ?' ಎಂಬುದು.

ಕನಕದಾಸರ 'ಆದಿಕೇಶವ' ಅಂಕಿತದ ಆರಾಧ್ಯದೈವ ನೆಲಸಿರುವದು ಕಾಗಿನೆಲೆಯಲ್ಲಿ ಮಣ್ಣಿನಿಂದ ಕಟ್ಟಿದ ದೇವಸ್ಥಾನದಲ್ಲಿ 'ನಾನು' ಎಂಬ ಅಹಂಭಾವ ಹೋದರೆ ಮೋಕ್ಷಕ್ಕೆ ಹೋದೇನು ಎಂದ ಕನಕದಾಸರು 'ದೀನ ನಾನು, ಸಮಸ್ತ ಲೋಕಕೆ ದಾನಿ ನೀನು' ಎಂಬುದನ್ನು ಅನುಭವಿಸಿದ ಅನುಭಾವಿಯಾಗಿದ್ದರು. ಕನಕದಾಸ ತಾನುಂಡ ನೋವು ವಿಷಾದಗಳನ್ನು ಕೇವಲ ಆಕ್ರೋಶದ ಮಾತುಗಳನ್ನು ಆಡಿ ತೀರಿಸಿಕೊಳ್ಳದೇ ಅದನ್ನು ಸಾಹಿತ್ಯವನ್ನಾಗಿಸಿ ಸಾಮಾಜಿಕ ಜೀವನವನ್ನು ದರ್ಶಿಸಿದ ಮಹಾ ಮಾನವತಾವಾದಿ. ಕನಕದಾಸರು ತಮ್ಮ ಕೊನೆಯ ದಿನಗಳನ್ನು ಕಾಗಿನೆಲೆಯಲ್ಲಿ ಕಳೆದು ವೃದ್ಧಾಪ್ಯದಿಂದ ಆದಿಕೇಶವನಲ್ಲಿ ಐಕ್ಯರಾದರು. ಅವರ ಐಕ್ಯದ ೧೫೭೩ ಅಥವಾ ೧೬೦೬ ಎಂಬುದರ ಬಗ್ಗೆ ಖಚಿತವಿಲ್ಲ ಇನ್ನೂ ಶೋಧನೆ ಆಗಬೇಕಿದೆ. ಕನಕ ದಾಸರು ವಿಶ್ವಮಾನವ ನಿಲುವಿನ ತಳಹದಿಯ ಮೇಲೆ ವಿಶ್ವಪ್ರಜ್ಞೆಯನ್ನು ಕಟ್ಟಿದ ಮಾನವತಾವಾದಿ. ❖

### ಶ್ರೀವಾಣಿ

ಸಾಮಾನ್ಯವಾಗಿ ಇಂದು ಎಲ್ಲಾ ಕಡೆಗಳಲ್ಲಿಯೂ ನಾಸ್ತಿಕತೆ ಬೆಳೆಯುತ್ತಿದೆ. ನಂಬಿಕೆ ಇಲ್ಲದ ತತ್ವ, ಅಶ್ರದ್ಧೆ ತಲೆದೋರುತ್ತಿದೆ. ಮನುಷ್ಯ ತನ್ನ ಶಕ್ತಿಯನ್ನೇ ದೊಡ್ಡದು ಮಾಡಿ ಪ್ರಚಂಡವಾದ ಕೆಲಸವನ್ನು ಸಾಧಿಸುತ್ತೇನೆಂಬ ಭ್ರಮೆಯಲ್ಲಿ ಪರಾತ್ಪರ ವಸ್ತುವನ್ನು ಮರೆತಿದ್ದಾನೆ. ಪರಾತ್ಪರ ಪ್ರಭುವಾದ ಅವನ ಜ್ಞಾನ ಶಕ್ತಿಯ ಮುಂದೆ ಎಷ್ಟೇ ಸಾಹಸಿ ಮಾನವನಾದರೂ ಅವನ ಶಕ್ತಿ ಅತ್ಯಲ್ಪವೇ ಸರಿ.

# ಸಂತ-ದಾರ್ಶನಿಕ ಕನಕದಾಸರು

-ಯು.ಎನ್. ಸಂಗನಾಳಮಠ *

ಹದಿನಾರನೇ ಶತಮಾನದ ದಾಸ ಸಾಹಿತ್ಯ ಕಾಲದಲ್ಲಿ ಕನಕದಾಸರು ಕೀರ್ತನಕಾರರು, ಸಂತರು ಎಂದು ಹೆಸರಾದವರು. ಕವಿ ಮತ್ತು ದಾರ್ಶನಿಕರಾದ ಕನಕದಾಸರು ಕಟ್ಟಿಕೊಟ್ಟ ಜೀವನದ ಮೌಲ್ಯಗಳು ಸಮಾಜಮುಖಿ ಚಿಂತನೆಗಳು ಇಂದಿಗೂ ಪ್ರಸ್ತುತ. ಅವರ ಸಾಹಿತ್ಯ ಅವರ ಶುಭ್ರ ಬದುಕಿನ ಪ್ರತಿಬಿಂಬವಾಗಿತ್ತು. ಅವರ ನಿರ್ಲಿಪ್ತ ಮನೋಭಾವವೇ ಅವರ ಬದುಕಿನ ಸಾರ್ಥಕತೆಗೆ ಕಾರಣ. ಯಾವುದೇ ರಾಗಾದಿಗಳಿಲ್ಲದೆ ಜೀವನ ಸಾಗಿಸಿದ್ದಕ್ಕೆ ಅವರನ್ನು ಸಂತ ಎನ್ನಲಾಗಿದೆ.



ಈಗಿನ ಹಾವೇರಿ ಜಿಲ್ಲೆಯ ಬಂಕಾಪುರ. ಆಗ ವಿಜಯನಗರ ಸಾಮ್ರಾಜ್ಯದ ಆಡಳಿತ ವಿಭಾಗವ್ಹಾಗಿತ್ತು. ಅಲ್ಲಿ ಬೀರೇಗೌಡನೆಂಬ ಕುರುಬ ಜನಾಂಗಕ್ಕೆ ಸೇರಿದ ವ್ಯಕ್ತಿ ಆಡಳಿತಾಧಿಕಾರಿಯಾಗಿದ್ದನು. ಈತನ ಪತ್ನಿ ಬಚ್ಚಮ್ಮ. ಇವರ ಮಗನಾಗಿ ೧೪೮೭ರ ಕಾರ್ತೀಕ ಮಾಸದಲ್ಲಿ ತಿಮ್ಮಪ್ಪ ಜನಿಸಿದ. ಬಂಕಾಪುರದ ಪ್ರಸಿದ್ಧ ಸಂಸ್ಕೃತ ಪಂಡಿತರಾದ ಶ್ರೀನಿವಾಸಾಚಾರ್ಯರಲ್ಲಿ ಕಾವ್ಯ, ಛಂದಸ್ಸು, ನಾಟಕ, ಅಲಂಕಾರ ಶಾಸ್ತ್ರಗಳನ್ನು ಅಭ್ಯಸಿಸಿದ. ಹಾಗೆ ಯುದ್ಧಕಲೆಯನ್ನು ಕಲಿತ. ಭಜನೆಗಳನ್ನು ಹಾಡುತ್ತಿದ್ದ. ದೇವರ ಧ್ಯಾನದಲ್ಲಿ ತಲ್ಲೀನ ನಾಗಿರುತ್ತಿದ್ದ.

ಕೆಲವರ ಪ್ರಕಾರ ಮೂಲತಃ ಇವರು ಬಾಡಗ್ರಾಮದವರು ಎನ್ನಲಾಗಿದೆ. ಹೀಗಾಗಿ ಬಾಡದ ಸುತ್ತಮುತ್ತಲಿನ ಪ್ರದೇಶಕ್ಕೆ ಬೀರೇಗೌಡ ಮಾಂಡಲಿಕನಾಗಿದ್ದನು ಎನ್ನಲಾಗಿದೆ. ತಿಮ್ಮಪ್ಪನ ತಂದೆ ಆಕಸ್ಮಿಕವಾಗಿ ತೀರಿಕೊಂಡಾಗ ಬೀರಗೌಡನ ಪರಮವೈರಿ ಮಲ್ಲನಾಯಕ ಆಡಳಿತಾಧಿಕಾರಿಯಾದ. ಆಗ ತಿಮ್ಮಪ್ಪ ಕಾಗಿನೆಲೆಗೆ ಹೋಗಿ ನೆಲೆಸಿದ. ಒಮ್ಮೆ ತನ್ನೂರಿನಲ್ಲಿ ಹೊಲ ಅಗೆಯುತ್ತಿದ್ದಾಗ ಬಂಗಾರದ ನಾಣ್ಯಗಳಿಂದ ತುಂಬಿದ ಕೊಡವು ಸಿಕ್ಕು, ಆ ನಾಣ್ಯಗಳನ್ನು ಅನ್ನದಾನಕ್ಕೆ, ಧಾರ್ಮಿಕ ಕಾರ್ಯಗಳಿಗೆ, ದೇವಸ್ಥಾನ ಜೀರ್ಣೋದ್ಧಾರಕ್ಕೆ ವಿನಿಯೋಗಿಸಿದ್ದರಿಂದ ಜನರು 'ಕನಕ' ಎಂದು ಕನಕಪ್ಪ, ಕನಕರಾಜ ಎಂದೂ ಕರೆದರು. ಈ ವಿಷಯ ತಿಳಿದು ಮಲ್ಲನಾಯಕ ಆತನ ಮೇಲೆ ದಾಳಿ ಮಾಡಿ ಮಾರಣಾಂತಿಕ ಗಾಯಗೊಳಿಸಿದ. ಕನಕನ ಜೀವನ ಆಧ್ಯಾತ್ಮಿಕತೆಗೆ ತಿರುಗಿತು. ಈ ವಿಷಯ ತಿಳಿದು ಶ್ರೀಕೃಷ್ಣದೇವ ರಾಯನು ಅವನನ್ನು ಬಾಡ ಮತ್ತು ಬಂಕಾಪುರಗಳ ಆಡಳಿತಾಧಿಕಾರಿ ಮಾಡಿದರು ಎನ್ನಲಾಗಿದೆ. ಹೀಗಾಗಿ ಕನಕ ನಾಯಕನಾಗಿ ಅನೇಕ ಕಲ್ಯಾಣ ಕಾರ್ಯಗಳನ್ನು ಮಾಡಿದನು. ವಿವಾಹವಾಗಿ ಗಂಡುಮಗು ವನ್ನು ಹೊಂದಿದನು.

ಆದರೆ ಕನಕನಾಯಕ ಉತ್ತುಂಗಾವಸ್ಥೆಯಲ್ಲಿದ್ದಾಗ ಪತ್ನಿ ಮಗ ಅಕಾಲಿಕ ನಿಧನದಿಂದ ಪರಿತಾಪ ಹೊಂದಿದನು. ಈ ಸಮಯದಲ್ಲಿ ಕೃಷ್ಣದೇವರಾಯನ ನಿಧನದಿಂದ ಮತ್ತೆ ಮಲ್ಲನಾಯಕನು ಚಿಕ್ಕಸೈನ್ಯದೊಂದಿಗೆ ಬಹುಮನಿ ಸುಲ್ತಾನರ ಸೈನ್ಯದೊಂದಿಗೆ ಎರಗಿದಾಗ ಕನಕನಾಯಕನ ಸೈನ್ಯ ಸೋತಿತು. ಕನಕರ ಕನಸಿನಲ್ಲಿ ಅವರ ಆರಾಧ್ಯದೈವ ತಿಮ್ಮಪ್ಪ ಕಾಣಿಸಿಕೊಂಡು ತನ್ನ ದಾಸನಾಗಲು ಸೂಚಿಸಿದಂತಾಯಿತು. ಆಗ ತಮ್ಮ ಮೊದಲಿನ ಪೋಷಾಕುಗಳನ್ನು ತ್ಯಜಿಸಿ, ಮೊಳಕಾಲವರೆಗೆ ಧೋತರ, ಹೆಗಲ ಮೇಲೆ ಕರಿಕಂಬಳಿ, ತಲೆಯ ಮೇಲೆ ರುಮಾಲು, ಬಲಭುಜಕ್ಕೆ ಏಕತಾರಿ, ಎಡ ಹೆಗಲಿಗೆ ಬುಟ್ಟಿ ಎಡಗೈಯಲ್ಲಿ ತಾಳಗಳನ್ನು ಹಿಡಿದುಕೊಂಡು ಮನೆ ತ್ಯಜಿಸಿ ಯಾತ್ರಾರ್ಥಿ ಆದರು. ಹರಿದಾಸರಾಗಿ ಕನಕ ದಾಸರಾದರು. ತಾಯಿಯ ಮರಣಾನಂತರ ಬಾಡದಲ್ಲಿದ್ದ ಆದಿಕೇಶವನ

* ವಿಶ್ರಾಂತ ಪ್ರಾಧ್ಯಾಪಕರು, 'ಹೊಂಬೆಳಕು', ಮನೆ ನಂ. ೧೧೨-೧೧೩ ಓಂ ಹೈಸ್ಕೂಲ್ ಹತ್ತಿರ, ಧಾರವಾಡ-೫೮೦ ೦೦೩.





ಮಂದಿರದ ವಿಗ್ರಹವನ್ನು ಕಾಗಿನೆಲೆಗೆ ಒಯ್ದು ಸ್ಥಾಪಿಸಿದರಂತೆ. ಅಲ್ಲಿ ದೇವಾಲಯ ನಿರ್ಮಿಸಿ ಧಾರ್ಮಿಕ ಕಾರ್ಯ ಆರಂಭಿಸಿದರು.

ಚಂದ್ರಕಾಂತ ಬಿಜ್ಜರಗಿ ತಮ್ಮ ಕೃತಿಯಲ್ಲಿ ಬೇಡ ಎಂಬುದಕ್ಕೆ ಕುರುಬ ಎನ್ನುವ ಅರ್ಥವಿದೆ ಎನ್ನುತ್ತಾರೆ. ಬೇಡರ ಪಂಗಡದಲ್ಲಿ 'ಮ್ಯಾಸ' (ಮೇಯಿಸುವ) ಎನ್ನುವವರಲ್ಲಿ ಸ್ಥಳೀಯ ಕುರುಬರ ವಂಶಾವಳಿಯನ್ನು ಕಾಣಬಹುದು ಎನ್ನುತ್ತಾರೆ. ಡಾ॥ ಎಂ.ಎಂ. ಕಲಬುರ್ಗಿಯವರ ಪ್ರಕಾರ ಕನಕದಾಸರು ಕುರುಬ ಜನಾಂಗದವರಲ್ಲ ಬೇಡ ಜನಾಂಗ ದವರು ಎನ್ನುತ್ತಾರೆ. 'ಖ್ಯಾತ ಸಂಶೋಧಕ ಶ್ರೀ ರಾಜಪುರೋಹಿತರು ಆದಿ ಬಣಜಿಗ ಸಮುದಾಯಕ್ಕೆ ಅಂದರೆ ಆಂಧ್ರ ಮೂಲದ ರೆಡ್ಡಿ ಸಮುದಾಯಕ್ಕೆ ಸೇರಿದ್ದು ಎನ್ನ ಲಾಗಿದೆ. ಇಬ್ಬರೂ ಮಹಾನ್ ಸಂಶೋಧಕರು.

ಕನಕದಾಸ ಬದುಕಿನ ತಲ್ಲಣಗಳನ್ನು ಅನುಭವಿಸಿ ಪ್ರತಿಸ್ಪಂದಿಸಿ ದೈವಬಲಕ್ಕೆ ಶರಣಾದ. ವ್ಯಾಸರಾಯರ ಮುಖಂಡತ್ವದ ವೈಷ್ಣವ ಧರ್ಮದ ಕಡೆ ಮನಸ್ಸು ವಾಲಿರಬೇಕು. ವೇದಶಾಸ್ತ್ರಗಳನ್ನು ತಿಳಿಸಿ ಹೊರಟಿದ್ದ ದಾಸ ಪರಂಪರೆಗೆ ಶೂದ್ರ ವರ್ಗದಿಂದ ಬಂದ ಕನಕದಾಸ ಆಶ್ಚರ್ಯ ಎನಿಸಿದೆ. ಹೀಯಾಳಿಕೆಯ ವಸ್ತುವಾದ ಆಗ ಕನಕದಾಸ ತನ್ನ ಅಸ್ತಿತ್ವವನ್ನು ತಾನೇ ಕಂಡುಕೊಳ್ಳಬೇಕಾಯಿತು. ಕನಕದಾಸರು ಶಿವದ್ವೇಷಿಯಾಗಿರಲಿಲ್ಲ. ಶಿವನ ಹೃದಯದಲ್ಲಿ ವಿಷ್ಣುವನ್ನು, ವಿಷ್ಣುವಿನ ಹೃದಯದಲ್ಲಿ ಶಿವನನ್ನು ಕಂಡ ಪರಮಭಾಗವತರು. ಮೋಹನ ತರಂಗಿಣಿ ಕಾವ್ಯದಲ್ಲಿ ಹರ-ಹರಿ ನಡುವೆ ಯುದ್ಧ ಮಾಡಿಸಿ ಕೊನೆಯಲ್ಲಿ ಹರ ಬೇರೆಯಲ್ಲ ಹರಿ ಬೇರೆಯಲ್ಲ ಎಂಬ ತತ್ತ್ವ ಪ್ರತಿಪಾದನೆ ಮಾಡಿದರು. ಅವರದು ದಾಸ್ಯಭಕ್ತಿ ಅರ್ಪಣಾಭಕ್ತಿ.

ಹಲವಾರು ಧರ್ಮಕ್ಷೇತ್ರಗಳಿಗೆ ಭೇಟಿ ಆದಾಗ ರಚಿತವಾದ ಕೀರ್ತನೆಗಳನ್ನು ಅವಲೋಕಿಸಿದಾಗ, ವಿವಿಧ ತಾಳ ಮಟ್ಟುಗಳಿಗೆ ಅನುಗುಣವಾಗಿರುವುದನ್ನು ಕಾಣಬಹುದು. ಜಾನಪದ ನೆಲೆಯ ಕನಕದಾಸರು ಜನಪದ ವಾದ್ಯ ಗೀತ ನರ್ತನಗಳನ್ನು ಉಸಿರಾಗಿಸಿಕೊಂಡದ್ದರಿಂದ ಅವರ ರಚನೆಗಳಲ್ಲಿ ಜಾನಪದ ಸೊಗಸು ಇರುತ್ತದೆ. ಕೀರ್ತನಗಳನ್ನು ಭಕ್ತಿ ಪ್ರಧಾನ, ತಾತ್ವಿಕ ಮತ್ತು ವಿಡಂಬನಾತ್ಮಕ ಎಂದು ಮೂರು ವಿಧದಲ್ಲಿ ವಿಂಗಡಿಸಬಹುದು. ಭಕ್ತಿ ಪ್ರಧಾನದಲ್ಲಿ ಮಾನವ ದೇವ ಸಂಬಂಧವನ್ನು ಭಕ್ತನೊಬ್ಬ ದೇವನನ್ನು ಒಡೆಯನನ್ನಾಗಿ(ದಾಸ್ಯಭಾವ) ಗೆಳೆಯನನ್ನಾಗಿ(ಸಖಭಾವ) ಪತಿಯನ್ನಾಗಿ(ಮಧುರಭಾವ) ಮಗುವಾಗಿ(ವಾತ್ಸಲ್ಯಭಾವ) ಮತ್ತು ಸುಂದರಮೂರ್ತಿಯಾಗಿ (ಶಾಂತಭಾವ) ಈ ರೀತಿ ಆರಾಧಿಸುತ್ತಾರೆ. ತಾತ್ವಿಕ ಪ್ರಧಾನದಲ್ಲಿ ದ್ವೈತ ಭಾವ ಸಿದ್ಧಾಂತವನ್ನು ವಿಡಂಬನಾತ್ಮಕ ಪ್ರಧಾನದಲ್ಲಿ ಸಮಾಜದ ಅನಿಷ್ಟಗಳನ್ನು ಖಂಡಿಸುತ್ತಾರೆ. ಯಜ್ಞಯಾಗ ಜಾತೀಯತೆ ಮಡಿವಂತಿಕೆಗಳನ್ನು ಖಂಡಿಸುತ್ತಾರೆ. 'ಕುಲಕುಲವೆಂದು ಹೊಡೆದಾಡದಿರಿ' ಎಂಬ ಕೀರ್ತನೆ ಪ್ರಸಿದ್ಧವಾದದ್ದು ಕೀರ್ತನೆಗಳ ಭಕ್ತಿ ಪ್ರಧಾನಗಳು.

ಕನಕದಾಸರ ಕೀರ್ತನೆಗಳು ಕೆಲವು ಮತಾಂತರವಾಗಿವೆ ಎನ್ನುತ್ತಾರೆ 'ಗಾದೆಗಳ ವಿಶ್ವಕೋಶ' ಎಂದು ಹೆಸರಾದ ಪ್ರೊ. ಸುಧಾಕರ. ೧೮೧೭ರಲ್ಲಿ ಲಾರ್ಡ್ ಮೆಕೆನ್ಜಿ ತಂಜಾವೂರ ಬಳಿಯ ವರವೂರಿನಲ್ಲಿ ಆಂಜನೆಯ ಶರ್ಮ ಎಂಬುವರಿಂದ ೧೭೫ ಕೀರ್ತನೆಗಳನ್ನು ಹಣ ಕೊಟ್ಟು ಕೊಂಡರು. ಅದನ್ನು ಅವರು ಮದ್ರಾಸಿನ ಹಸ್ತಪ್ರತಿ ಗ್ರಂಥ ಭಂಡಾರದಲ್ಲಿರಿಸಿದರು. ೧೯೨೧ರಲ್ಲಿ ಅವರು ಮೃತರಾದ ನಂತರ, ಹಸ್ತಪ್ರತಿ ಹಾಳಾಗುತ್ತ ಬಂದದ್ದರಿಂದ ಮರುಪ್ರತಿ ಮಾಡುವಾಗ ಐದಾರು ಕೀರ್ತನೆಗಳನ್ನು ಬಿಟ್ಟು ಉಳಿದೆಲ್ಲ ಕೀರ್ತನೆಗಳನ್ನು ಪುರಂದರದಾಸರ ಹೆಸರಿಗೆ ವರ್ಗಾವಣೆ ಮಾಡಲಾಯಿತು ಎಂದಿದ್ದಾರೆ! ಇದಕ್ಕೆ ಉದಾಹರಣೆ 'ಎಲ್ಲ ಲೊಳಲೊಟ್ಟೆ', 'ಆದದ್ದೆಲ್ಲ ಒಳಿತೇ ಆಯಿತು' ಮುಂತಾದುವು 'ಎಲ್ಲಾರು ಮಾಡುವುದು ಹೊಟ್ಟೆಗಾಗಿ' 'ಮುತ್ತು ಬಂದಿದೆ ಕೇರಿಗೆ' 'ಮರವ ನುಂಗುವ ಪಕ್ಷಿ' ಇವೂ ಸಹ ಕನಕದಾಸರವು ಎಂದು ಪಂಜೇ ಮಂಗೇಶರಾಯರು ಹೇಳಿದ್ದಾರೆ ಕನಕ ದಾಸರ ೨೫೦ ಕೀರ್ತನೆಗಳು ಮಾತ್ರ ಲಭ್ಯವಿವೆ.

'ಮೋಹನ ತರಂಗಿಣಿ' ಅವರ ಪ್ರಥಮ ಧಾರ್ಮಿಕ ಕಥಾನಕ. ನಡುಗನ್ನಡದಲ್ಲಿ ರಚಿಸಿದ ಕಥನಕಾವ್ಯವನ್ನು ತಮ್ಮ ಪತ್ನಿಗೆ ಸಂಬೋಧಿಸಿದ್ದಾರೆ. ಶ್ರೀಕೃಷ್ಣನ ಜೀವನವನ್ನು ಭಕ್ತಿ ರಸಪೂರ್ಣವಾಗಿ ಚಿತ್ರಿಸಿದ್ದಾರೆ ಈ ಕಾವ್ಯದಲ್ಲಿ ಶೃಂಗಾರರಸ ಪ್ರಧಾನವಾಗಿ ದ್ದರೂ ಭಕ್ತಿ, ಅದ್ಭುತ, ಕರುಣ, ಭೀಬತ್ಸ, ಶಾಂತ ರಸಗಳೂ ಅಭಿವ್ಯಕ್ತವಾಗಿವೆ. ಈ ಕಾವ್ಯದಲ್ಲಿ

ಸಿದ್ಧಾಂತ (The theory of Relativity) ಕ್ರಿ.ಶ. ೧೯೦೫ರ ಸಾಲಿನಲ್ಲಿ ಐನ್‌ಸ್ಟೈನರ ಪಾಲಿಗೆ ಬಂಗಾರದ ದಿನಗಳು. ಕಾರಣ ಒಬ್ಬ ೨೬ ವರ್ಷ ವಯಸ್ಸಿನ ಪೇಟೆಂಟ್ ಕಛೇರಿಯ ಗುಮಾಸ್ತ' ತನ್ನ ಕೆಲಸದ ನಡುವೆ ಕೇವಲ ಒಂದು ವರ್ಷದ ಅವಧಿಯಲ್ಲಿ ಮೂರು ಸಂಶೋಧನೆಗಳನ್ನು ಮಾಡಿ ಮುಗಿಸುತ್ತಾನೆ. ಈ ಸಾಪೇಕ್ಷತಾ ಸಿದ್ಧಾಂತಕ್ಕೆ ವಿಜ್ಞಾನಿಗಳ ವಲಯ ಬೆಚ್ಚಿ ಬಿತ್ತು. ವಿಜ್ಞಾನದ ಇತಿಹಾಸದಲ್ಲಿಯೇ, ಗಾತ್ರದಲ್ಲಿಯೂ, ಗುಣದಲ್ಲಿಯೂ ಇಷ್ಟು ಅಲ್ಪ ಅವಧಿಯಲ್ಲಿ ಇಂತಹ ಸಾಧನೆ ಮಾಡಿರುವುದು ಒಂದು ದಾಖಲೆಯೇ!

ಐನ್‌ಸ್ಟೈನ್ ನಡೆದಾಡುವ ಜಾಗವನ್ನು ವಿಜ್ಞಾನಿಗಳು, ವಿದ್ಯಾರ್ಥಿಗಳು, ಸಾಮಾನ್ಯ ಜನ ಸಹ ಪವಿತ್ರ ಸ್ಥಳವೆಂದು ಭಾವಿಸುತ್ತಿದ್ದರು. ಆತನನ್ನು ಒಮ್ಮೆ ನೋಡಬೇಕೆಂದು, ಆತನ ಮಾತನ್ನು ಕೇಳಬೇಕೆಂದು ಲಕ್ಷಾಂತರ ಜನ ಹಂಬಲಿಸುತ್ತಿದ್ದರು. ಪ್ರಖ್ಯಾತ ಚರ್ಚೊಂದು ತನ್ನ ಆವರಣದಲ್ಲಿ ಆತನ ಪ್ರತಿಮೆಯನ್ನು ಸ್ಥಾಪಿಸಿ 'ಮಹಾನ್ ಸಂತ'ನೆಂದು ಕರೆಯಿತು. ವಿಜ್ಞಾನ ಕ್ಷೇತ್ರದಲ್ಲಂತೂ ಆತ ಮಾಡಿದ ಸಂಶೋಧನೆಗಳು ಯುಗಪ್ರವರ್ತಕವೆನಿಸಿಕೊಂಡವು. ಜಗತ್ತಿನಾದ್ಯಾಂತ ನೊಂದವರು, ತುಳಿತಕ್ಕೆ ಒಳಗಾದವರು ಆತ ತಮ್ಮ ವಕ್ತಾರನೆಂದು ಭಾವಿಸಿ ಪ್ರೀತಿಸಿದರು. ಇವೆಲ್ಲಾ ಸಾಧನೆಗಳಿಗೆ ಹೋಲಿಸಿದರೆ ಆತನಿಗೆ ನೀಡಲ್ಪಟ್ಟ ಬಹುಮಾನ ಲೆಕ್ಕಕ್ಕೆ ಇಲ್ಲದಂತಾಗುತ್ತದೆ.

ಐನ್‌ಸ್ಟೈನರ ಜೀವನದಲ್ಲೊಂದು ಘಟನೆ ಹೀಗಿತ್ತು. ಅಮೆರಿಕಾದ ರಿವರ್‌ಸೈಡ್ ಚರ್ಚು ಇತಿಹಾಸ ಕಂಡ ಆರುನೂರು ಸುಪ್ರಸಿದ್ಧ ವ್ಯಕ್ತಿಗಳ ಪ್ರತಿಮೆಗಳನ್ನು ಕಡೆದು ನಿಲ್ಲಿಸಲು ಯೋಚಿಸಿ, ಅದರಲ್ಲಿ ಹದಿನಾರು ವಿಜ್ಞಾನಿಗಳ ಪಟ್ಟಿಯೊಂದನ್ನು ನೀಡಲು ಕೇಳಿದಾಗ ಎಲ್ಲರ ಪಟ್ಟಿಯಲ್ಲೂ ತಪ್ಪದೇ ಇದ್ದ ಹೆಸರು ಐನ್‌ಸ್ಟೈನ್‌ರದಂತೆ! ಅಷ್ಟೇ ಅಲ್ಲ. ಆರು ನೂರು ಜನರಲ್ಲೂ ಬದುಕಿದ್ದವರೂ ಅವರೊಬ್ಬರೇ!

೧೨ನೆಯ ಶತಮಾನದಲ್ಲಿ 'All most all goes to Basava Kalyana' ಇರುಳು ಮೊಟ್ಟೆಯಲ್ಲಿ ಬೆಳಕಿನ ಮರಿ (ಇಷ್ಟಲಿಂಗ) ಎಂಬುದು ಬಸವಣ್ಣನವರ ಹೃದಯಾಂತರಾಳದಿಂದ ಒಂದು ವಿಶಿಷ್ಟ ಕಲ್ಪನೆಯ (God of metaphysics) ಅನುಪಮ ಕೂಸು. ಸೃಷ್ಟಿಕರ್ತನ ತಾರ್ಕಿಕವಾದ ಚಿತ್ಕಳೆ, ಪಿಂಡಾಂಡ ಹಾಗೂ ಬ್ರಹ್ಮಾಂಡದ ಮಧ್ಯ ಸಂಬಂಧ ನಿರ್ಮಿಸುವ ಅರಿವಿನ ಕುರುಹು ಈ ಇಷ್ಟಲಿಂಗ. ಆಲ್ಬರ್ಟ್ ಐನ್‌ಸ್ಟಿನ್‌ರಿಗೆ ಹೊಳೆದ ಸಾಪೇಕ್ಷ ಸಿದ್ಧಾಂತದಂತೆ ಇಷ್ಟಲಿಂಗದ ಪರಿಕಲ್ಪನೆಯೂ ಸಹ ಅವರ ಮನಸ್ಸಿನಲ್ಲಿ ರೂಪಗೊಂಡಿದ್ದು ಅನುಭವಮಂಟಪದಲ್ಲಿ ಒಂದು ಲಕ್ಷದ ತೊಂಭತ್ತಾರು ಸಾವಿರ ಅಮರ ಗಣಂಗಳಲ್ಲಿ 'ಜಗಜ್ಯೋತಿ' ಬಸವಣ್ಣನವರನ್ನು ಇಡೀ ಮನುಕುಲ ಗುರುತಿಸುವುದು ಅಸಮಾನ್ಯವಾದದ್ದು. ಉಪಮಿಸಲಿಕ್ಕೆ ಬಾರದ ಉಪಮಾತೀತರು. ಶರಣ ಮೆಚ್ಚಿದ ಧರೆ ಪಾವನ, ಕೈಲಾಸ, ಪವಿತ್ರ ಸ್ಥಳವೆಂದು ಇಂದಿಗೂ ಎಂದೆಂದಿಗೂ ಜನಜನಿತವಾಗಿರುತ್ತದೆ. 'ಪಂಚಪರುಷ' ಶಕ್ತಿಯನ್ನು ಹೊಂದಿದ ಬಸವಣ್ಣನವರ ಪರುಷ ಪಾದದಿಂದ ಭಕ್ತಿಯ ಬೀಡಾಗಿತ್ತು. ಶಿವಯೋಗಿ ಸಿದ್ಧರಾಮೇಶ್ವರರು ಹೇಳುವಂತೆ, 'ಅಯ್ಯಾ ಭಕ್ತಿಗೆ ಬೀಡಾದುದು ಕಲ್ಯಾಣ ೩೬ ವರ್ಷ, ಅನುಭವಕ್ಕೆ ಶಿವಸದನವಾದುದು ೨೭ ವರ್ಷ'. ಈ ಪವಿತ್ರ ಕಲ್ಯಾಣದ ಶರಣ ಭೂಮಿಯು ಇಂದು ನಮಗೆಲ್ಲ ಧರ್ಮಭೂಮಿ (Holy land). ಇವರ ದರ್ಶನ, ಸ್ಪರ್ಶನ, ಸಂಭಾಷಣೆಗೋಸ್ಕರ ಅನೇಕ ಜನಸ್ತೋಮ ತಮ್ಮ ರಾಜಾಶ್ರಯ ತೊರೆದು 'ಬಸವಸಾಗರದಲ್ಲಿ ಸಾಮರಸ್ಯ' ಹೊಂದಿದರು. ಒಬ್ಬ ಮಾನವತಾವಾದಿ, ಸಮಾಜ ಸುಧಾರಕ, ಸಮಾನತೆಯ ಹರಿಕಾರ, ಅರ್ಥಶಾಸ್ತ್ರಜ್ಞ, ದಕ್ಷ ಆಡಳಿತಗಾರ, ಸಕಲ ಜೀವಾತ್ಮರಿಗೆ ಲೇಸನೇ ಬಯಸಿದ ಆ ಮಹಾಘನ ಶಕ್ತಿಯ ವಿಚಾರಗಳು ವೈಜ್ಞಾನಿಕ ಮತ್ತು ವೈಚಾರಿಕವಾಗಿದ್ದವು. ಅಷ್ಟೇ ಅಲ್ಲ, ಒಬ್ಬ ವಿಜ್ಞಾನಿಯಲ್ಲಿರಬೇಕಾದ ಜ್ಞಾನದ ಹೊಳೆ ಅವರಲ್ಲಿತ್ತು. ಅವರನ್ನು ತ್ರಿಕಾಲಜ್ಞಾನಿ ಎಂದು ಕರೆಯುತ್ತೇವೆ. ಬಸವಣ್ಣನವರ ವಚನದಲ್ಲಿ 'ಸಾಪೇಕ್ಷತಾ ಸಿದ್ಧಾಂತ' ಹೇಗಿದೆ ಹೀಗಿದೆ ನೋಡಿ

*ಬಯಲ ರೂಪ ಮಾಡಬಲ್ಲಾತನೆ ಶರಣನು*
*ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ*
*ಬಯಲ ರೂಪ ಮಾಡಲರಿಯದಿದ್ದರೆ*
*ಎಂತು ಶರಣನೆಂಬೆನಯ್ಯ?*
*ಆ ರೂಪ ಬಯಲ ಮಾಡಲರಿಯದಿದ್ದರೆ–ಎಂದು*
*ಲಿಂಗಾನುಭವಿ ಎಂಬೆನಯ್ಯಾ?*
*ಈ ಉಭಯ ಒಂದಾದರೆ ನಿಮ್ಮಲ್ಲಿ ತೆರಹುಂಟೆ*
*ಕೂಡಲಸಂಗಮದೇವಾ*

'ಬಯಲು' ಎಂದರೆ ಈಗಾಗಲೇ ಹೇಳಿದಂತೆ





ಅದೊಂದು 'ಶಕ್ತಿ' ರೂಪ ಮಾಡಬಲ್ಲಾತನೆ ಶರಣನು ಎಂದರೆ ಚೆನ್ನಬಸವಣ್ಣನವರ ವಚನದಲ್ಲಿ ಹೀಗಿದೆ. 'ಶರ' ಎಂದರೆ ಬಾಣ, 'ಣ' ಎಂದರೆ ಮನ್ಮಥ. ಅಂದರೆ 'ಕಾಮನೆಂಬ ಮನ್ಮಥನನ್ನು ಗೆದ್ದವನೆ ಶರಣ' ಎಂದರ್ಥ. ಅಂದರೆ ಅಧೋಮುಖವಾಗಿ ಹರಿಯುವ ಕುಂಡಲಿನಿ ಶಕ್ತಿಯನ್ನು ಸಾಧಕ ಊರ್ಧ್ವಮುಖವನ್ನಾಗಿ ಮಾಡಿಕೊಂಡು, ಸಹಸ್ರಾರು ಚಕ್ರದಲ್ಲಿ ಆ ಕುಂಡಲಿನಿ ಶಕ್ತಿಯನ್ನು ಹರಿಸಿದರೆ ಅಮೃತದ ಕೊಡ ಉಕ್ಕಿ ಹರಿಯುತ್ತದೆ. ಪರಮಾನಂದದ ಸ್ಥಿತಿ ಇದು. ಅಕ್ಕಮಹಾದೇವಿ ತಮ್ಮ ಯೋಗಾಂಗ ತ್ರಿವಿಧಿಯಲ್ಲಿ 'ಮೊರೆವ ನಾದವ ಕೇಳಿ, ಉರಿವ ಜ್ಯೋತಿಯ ನೋಡಿ, ಸುರಿವ ಅಮೃತವ ದಣಿದುಂಡ ಕಾರಣದಿ ತೊರೆದೆನು ಜನನ ಮರಣಗಳ' ಎಂದು ಹೇಳುತ್ತಾರೆ.

'ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭವಿ. ಬಯಲ ರೂಪ ಮಾಡಲರಿಯದಿದ್ದರೆ ಎಂತು ಶರಣನೆಂಬೆನಯ್ಯ'? ಎಂದು ಪ್ರಶ್ನಿಸುತ್ತಾರೆ. ಅಷ್ಟೇ ಅಲ್ಲ; ಮುಂದೆ 'ಆ ರೂಪ ಬಯಲ ಮಾಡಲರಿಯದಿದ್ದರೆ ಎಂತು ಲಿಂಗಾನುಭವಿ ಎಂಬೆನಯ್ಯ? ಇಂತಹ ವ್ಯಕ್ತಿಯನ್ನು ಭವಿ ಎಂದು ಕರೆದಿದ್ದಾರೆ. ಅಂದರೆ ವಸ್ತುವನ್ನು ದೈವೀಶಕ್ತಿಯನ್ನಾಗಿ ಮಾರ್ಪಾಡು ಮಾಡುವ ಕಲೆ ಗೊತ್ತಿಲ್ಲದಿದ್ದರೆ, ಅಂದರೆ ಭವವನ್ನು ಗೆಲ್ಲದಿದ್ದರೆ ಅವನು ಶರಣನಲ್ಲ ಎಂದರ್ಥ. ಮಾನವನು ತನು–ಮನ–ಭಾವ–ಕರಣೇಂದ್ರಿಯ ಸಹಿತ ಆ ಪರಶಿವ ಸ್ವರೂಪವಾಗಬೇಕಾಗಿದೆ. ಅದಕ್ಕೆ ಶರಣರು 'ಉದಾತ್ತೀಕರಣ' ಎಂದು ಕರೆದರು. ಆಗ ಮಾನವನ ಸರ್ವಾಂಗವು ಲಿಂಗಾಂಗ ಪರಶಿವಾಂಗವಾಗುವುದು. 'ಈ ಉಭಯ ಒಂದಾದರೆ ನಿಮ್ಮಲ್ಲಿ ತೆರಹುಂಟೆ ಕೂಡಲಸಂಗಮದೇವಾ' ಅಂದರೆ, ಯಾವ ನಿಃಕಲ ಪರಶಿವ ತತ್ವದಿಂದ ತನ್ನನೊಳಗೊಂಡ ಸಮಸ್ತ ಸೃಷ್ಟಿಯು ರಚನೆಗೊಂಡಿದೆಯೋ ಪುನಃ ಆ ಪರಶಿವನಲ್ಲಿ ಬೆರೆಯುವ ನಿಜಾನುಭವವೇ ಲಿಂಗಾಂಗ ಸಾಮರಸ್ಯ'. 'ಲಿಂಗಾನಂದ', 'ಪರಮಸುಖ'ವೆಂದು ಕರೆಯುತ್ತೇವೆ. ಇದನ್ನೇ Supreme power ಎಂದು ಕರೆಯುತ್ತಾರೆ. ಇದೊಂದು ೧೨ನೆಯ ಶತಮಾನದ ಮಹಾನುಭಾವರ ಅನುಭಾವ. ಈ ಅನುಭಾವವನ್ನೇ ಐನ್‌ಸ್ಟೈನರು $E=mc^2$ 'ಸಾಪೇಕ್ಷ ಸಿದ್ಧಾಂತ'ವೆಂದು ಕರೆದರು. ಇಲ್ಲಿ ಶರಣರ ಅನುಭಾವ ಬೇರೆಯಲ್ಲ. ಐನ್‌ಸ್ಟೈನ್‌ರ ಅನುಭಾವ ಬೇರೆಯಲ್ಲ. ಒಟ್ಟಾರೆ ಶರಣರ ವಿಚಾರಗಳು ವೈಚಾರಿಕ ಮತ್ತು ವೈಜ್ಞಾನಿಕವಾಗಿದ್ದವು ಎನ್ನುವುದನ್ನು ನಾವು ಮರೆಯುವಂತಿಲ್ಲ.

ಬಸವಣ್ಣನವರನ್ನು 'ವಿಶ್ವಗುರು' (World father) ಎಂದು ಕರೆದರೆ, ಐನ್‌ಸ್ಟೀನ್‌ರನ್ನು ಕೆಲವೊಮ್ಮೆ ಫಾದರ್ ಆಫ್ ಆಟಂಬಾಂಬ್' (ಈ ಮಾತು ಪ್ರಖ್ಯಾತ ವಿಜ್ಞಾನಿಗಳು ಎಂಬ ಗ್ರಂಥದ ಸಂಪುಟ ೨ರಲ್ಲಿ ಇದೆ) ಎಂದು ಸೂಚಿಸುತ್ತಿದ್ದರು. ಜಪಾನಿನ ಎರಡು ಪಟ್ಟಣಗಳಾದ 'ಹಿರೋಶಿಮಾ' ಮತ್ತು 'ನಾಗಸಾಕಿ'ಯಲ್ಲಿ ಬಾಂಬ್‌ಸ್ಫೋಟವಾಗಿ ಎಲ್ಲವೂ ನಾಶವಾದಾಗ, ಆ ದುಃಖದ ದುರಂತವನ್ನು ಅವರ ಮನಸ್ಸಿನಿಂದ ತೆಗೆದು ಹಾಕಲು ಆಗಲಿಲ್ಲ. ಅವರು ತಮ್ಮ ಜೀವನದುದ್ದಕ್ಕೂ ಒಂದೇ ಒಂದು ಸಂಗತಿಗೆ ಪಶ್ಚಾತ್ತಾಪ ಪಡುತ್ತಿದ್ದರು. ಐನ್‌ಸ್ಟೈನ್‌ರ ವೈಜ್ಞಾನಿಕ ಸಂಶೋಧನೆಯಿಂದ ಬೇರೆ ವಿಜ್ಞಾನಿಗಳು ಅಣುಬಾಂಬನ್ನು ಕಂಡುಹಿಡಿದರು. ಇದೇ ನೋವಿನ ಸಂಗತಿ. ಅವರು ಸಹೋದರಭಾವದಿಂದ ಎಲ್ಲರೊಂದಿಗೆ ಇದ್ದು ಶಾಂತಿ ಕಾರ್ಯಕ್ಕಾಗಿ ಬಹಳ ಶ್ರಮಿಸಿದರು. ಪುನಃ 'ವಿಶ್ವಶಾಂತಿ'ಗಾಗಿ ದುಡಿದರು. 'ಅಣ್ವಸ್ತ್ರ' ನಿಷೇಧಕ್ಕಾಗಿ ಶ್ರಮಿಸಿದರು. ಜಗತ್ತಿನ ಅಳಿವು–ಉಳಿವು ಇದೇ ಸಿದ್ಧಾಂತದ ಮೇಲೆ ನಿಂತಿದೆ ಎಂದಿರುವರಲ್ಲದೆ 'ವಿಜ್ಞಾನ–ತಂತ್ರಜ್ಞಾನದ ಕ್ಷಿತಿಜ ಎಷ್ಟೇ ವಿಸ್ತಾರವಾದರೂ ಮಾನವೀಯ ಮೌಲ್ಯಗಳು ಉನ್ನತಿ ಹೊಂದದಿದ್ದಲ್ಲಿ ಸಮಾಜದ ಪ್ರಗತಿ ಅಸಾಧ್ಯ' ಎಂಬುದನ್ನು ಐನ್‌ಸ್ಟೈನ್‌ರು ಬಾರಿ ಬಾರಿ ಸಾರಿದ್ದಾರೆ.

❖

## ಶ್ರೀವಾಣಿ

ಧರ್ಮ ಎಲ್ಲೋ ಕುಳಿತಿಲ್ಲ, ಅದು ಎಲ್ಲರ ಸ್ವತ್ತು. ಆಡುವ ಆಟದಲ್ಲಿ, ಉಣ್ಣುವ ಅನ್ನದಲ್ಲಿ, ಉಡುವ ಬಟ್ಟೆಯಲ್ಲಿ, ಮಾಡುವ ಕಾರ್ಯದಲ್ಲಿ, ಆಡುವ ಮಾತಿನಲ್ಲಿ, ನೋಡುವ ದೃಷ್ಟಿಯಲ್ಲಿ, ಬಳಸುವ ಭಾವದಲ್ಲಿ ಧರ್ಮ ಎದ್ದು ಕಾಣುತ್ತದೆ. ಮನಸ್ಸು ಇದ್ದಲ್ಲೇ ಇದ್ದು ಉದ್ಧಾರದ ಮಾರ್ಗವನ್ನು ಸಾಧಿಸುವುದನ್ನು ತೋರಿಸುವುದೇ ಧರ್ಮ.

ಅಷ್ಟೇಕೆ ನಮ್ಮ ದೇಶದಲ್ಲಿಯೂ ಈ 'ಇಂಗ್ಲೀಷ್ ಮಂದಿ' ಯೇ ಇಂದು ದೇಶದ ಆರ್ಥಿಕ-ರಾಜಕೀಯ-ಶೈಕ್ಷಣಿಕ ಹಾಗೂ ಮಾಧ್ಯಮ ಕ್ಷೇತ್ರಗಳನ್ನು ಆವರಿಸಿಕೊಂಡು ಜನಸಾಮಾನ್ಯರ ಸಂಕಷ್ಟಗಳಿಗೆ ಕಾರಣರಾಗಿರುವುದು ಸ್ಪಟಿಕ ಮಣಿಯಷ್ಟು ಸ್ಪಷ್ಟವಾಗಿದೆ- ಯಾರೋ ಅಲ್ಲೊಬ್ಬ ಇಲ್ಲೊಬ್ಬ ಪ್ರಾಮಾಣಿಕ, ಸರಳ ಬದುಕನ್ನು ಒಪ್ಪಿಕೊಂಡು- ಜನ ಸಾಮಾನ್ಯರ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವವರು ಇರಬಹುದು. ಆದರೆ ಬಹುತೇಕರ ಮನಸ್ಥಿತಿ ಮೇಲಿನಂತೆಯೇ ಇದೆ.

ಇನ್ನೊಂದು ಮುಖ್ಯ ವಿಚಾರದ ಕಡೆ ನಾವು ಗಮನ ಹರಿಸಬೇಕಾಗಿದೆ. ಪಾಶ್ಚಾತ್ಯ ಶೈಲಿಯ ಆರ್ಥಿಕ ಚಿಂತನೆ ಯನ್ನು ನಮ್ಮ ದೇಶಕ್ಕೆ ಅಳವಡಿಸಿಕೊಂಡಿರುವುದರಿಂದ ಈಗಾಗಲೇ ಉಂಟಾಗಿರುವ ಬೃಹತ್ ಸಾಮಾಜಿಕ-ಆರ್ಥಿಕ ಪಿಡುಗುಗಳನ್ನು ದೂರ ಮಾಡುವುದು ಕಷ್ಟ ಸಾಧ್ಯವೇ ಸರಿ. ಇಂತಹ ಪರಿಸ್ಥಿತಿಯಲ್ಲಿ ಕನ್ನಡಿಗರ-ಭಾರತೀಯರ ಬದುಕು ಹಸನಾಗಬೇಕಾದರೆ ಅದು ನಮ್ಮ ದೇಶೀ ಚಿಂತನೆಗಳಿಂದ ಮಾತ್ರ ಎನ್ನುವುದು ನಿಶ್ಚಯವಾಗಿದೆ. ಅಂತೆಯೇ ನಮ್ಮ ಭಾಷೆಗಳಿಗೂ ನಮ್ಮ ಚಿಂತನೆಗಳಿಗೂ ನಿಕಟ ಸಂಬಂಧವಿದೆ.

ಇನ್ನೊಂದು ಮುಖದಿಂದಲೂ ಈ ಇಂಗ್ಲೀಷ್ ಭಾಷಾ ವ್ಯಾಮೋಹದ ಬಗ್ಗೆ ವಿಚಾರ ಮಾಡಬಹುದು. ಈಗ ಇರುವ ೧೨೫ ಕೋಟಿ ಭಾರತೀಯರೆಲ್ಲರೂ ಇಂಗ್ಲೀಷ್ ಭಾಷೆಯನ್ನು ಚೆನ್ನಾಗಿಯೇ ಕಲಿತೆವೆನ್ನಿ ನಮ್ಮೆಲ್ಲರಿಗೂ ಯಾವ ದೇಶದಲ್ಲಿ ಉದ್ಯೋಗ ಕೊಡುತ್ತಾರೆ? ಈಗಾಗಲೇ ಪಾಶ್ಚಾತ್ಯ ದೇಶಗಳಲ್ಲಿ ವಿಶೇಷವಾಗಿ ಅಮೆರಿಕಾದಲ್ಲಿ ಒಂದು ಚಳುವಳಿ ರೂಪುಗೊಳ್ಳುತ್ತಿದೆ. ಅದೇನೆಂದರೆ ಅಮೆರಿಕಾದಲ್ಲಿನ ವೃತ್ತಿಗಳು-ಹುದ್ದೆಗಳು ಅಮೆರಿಕಾದವರಿಗೆ ಮಾತ್ರ-ಸ್ವತಃ ಅಮೆರಿಕಾದ ಅಧ್ಯಕ್ಷ ಒಬಾಮರವರೇ ಹಲವು ಸಾರಿ ಈ ಬಗ್ಗೆ ಪ್ರಸ್ತಾಪಿಸಿರುವುದನ್ನು ಯಾರೂ ಗಮನಿಸಬಹು ದಾಗಿದೆ. ಇನ್ನು ಯುರೋಪುದೇಶಗಳು ಉದ್ಯೋಗ ಸೃಷ್ಟಿಯಲ್ಲಿ ಗರಿಷ್ಠ ಹಂತ ತಲುಪಿದ್ದು ಸ್ತಬ್ಧವಾಗಿವೆ. ಹಾಗಾದರೆ ಉದ್ಯೋಗ ಅರಸಿಕೊಂಡು ಹೊರದೇಶಗಳಿಗೆ ಹೋಗಬೇಕಾದರೆ ಆಫ್ರಿಕ, ಲ್ಯಾಟಿನ್ ಅಮೆರಿಕಾದ ಕೆಲವು ದೇಶಗಳಿಗೆ ಹೋಗಬೇಕಾಗುತ್ತದೆ. ಆದರೆ ಅಲ್ಲಿನ ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಬದುಕುಗಳ ಬಗ್ಗೆ ನಮಗೆ ಹೊಂದಾಣಿಕೆ ಸುಲಭ ಸಾಧ್ಯವೇ? ಇಂದು ಅಮೆರಿಕಾದಲ್ಲಿರುವ ಭಾರತೀಯರ ಸಂಖ್ಯೆ ಕೇವಲ ೩೦ ಲಕ್ಷ ಅಂದರೆ ಪ್ರತಿಶತ ೦.೨೫ ಇಂತಹ ಪರಿಸ್ಥಿತಿಯಲ್ಲಿ ಭಾರತೀಯರಿಗೆ ಕನ್ನಡಿಗರಿಗೆ ಉಳಿದಿರುವ ಆಯ್ಕೆಗಳೆಂದರೆ ಭಾರತದಲ್ಲಿಯೇ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕಾದ ಅನಿವಾರ್ಯತೆಯಿದೆ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಹಿರಿಯರು ನಮಗಾಗಿ ಬಹಳ ಶ್ರದ್ಧಾಸಕ್ತಿಗಳಿಂದ ರೂಪಿಸಿ ಕೊಟ್ಟಿರುವ ಸಂಸ್ಕೃತಿ-ಭಾಷೆ-ನಡೆ-ನುಡಿ ಎಲ್ಲವನ್ನೂ ಕಳ ಕೊಂಡು ಇಂಗ್ಲೀಷ್ ಭಾಷೆ-ಪಾಶ್ಚಾತ್ಯ ಜೀವನ ಶೈಲಿಗಳನ್ನು ಅಳವಡಿಸಿಕೊಳ್ಳಲು ಸಾಧ್ಯವೇ ಎಂಬುದನ್ನು ವಿಚಾರಮಾಡ ಬೇಕಾಗಿದೆ.

'ಭೂತವಿಲ್ಲದವನಿಗೆ ಭವಿಷ್ಯವಿಲ್ಲ'-ಎಂಬ ನಾಣ್ಣುಡಿ ಯೊಂದಿದೆ. ಇಂದು ನಮ್ಮ ಭಾಷೆಯು ಅವಸಾನದತ್ತ ಮುಖ ಮಾಡಿರುವುದು ನಮ್ಮಿಂದಲೇ ಹೊರತು ಅನ್ಯರಿಂದಲ್ಲ. ನಮ್ಮ ಕನ್ನಡನಾಡಿನ ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ನಮ್ಮ ಪೂರ್ವಿಕರು ಎಂತಹ ಧೀರೋದಾತ್ತ ಬದುಕನ್ನು ನಡೆಸಿದರು, ಘನತೆಯನ್ನು ಮೆರೆದರು ಎಂಬುದು ತಿಳಿಯುತ್ತದೆ. ರಾಷ್ಟ್ರಕೂಟರ-ಚಾಲುಕ್ಯರ ಆಳ್ವಿಕೆಯಂತೂ ಕಲೆ, ಸಾಹಿತ್ಯ, ಸಂಸ್ಕೃತಿಗಳಿಂದ ಸಮೃದ್ಧವಾಗಿದ್ದಲ್ಲದೆ ಬೇರೆ ಬೇರೆ ಜನಾಂಗಗಳನ್ನು-ಪ್ರದೇಶಗಳನ್ನು ಪ್ರಭಾವಿಸುವಷ್ಟು ಎತ್ತರಕ್ಕೆ ಬೆಳೆದಿದ್ದವು. ವಿಜಯನಗರದ ಇತಿಹಾಸವಂತೂ ಅತ್ಯಂತ ರೋಚಕವಾದುದಾಗಿದೆ. ಮೂರು ಮುಕ್ಕಾಲುಗಳಿಗೆ ಹೊನ್ನ ಮಳೆ ಸುರಿಸಿದರೆಂಬ ಪ್ರತೀತಿ. ಬೀದಿ ಬೀದಿಗಳಲ್ಲಿ ದವಸ-ಧಾನ್ಯಗಳನ್ನು ಮಾರಾಟ ಮಾಡುವಂತೆ, ಮುತ್ತು-ರತ್ನಗಳನ್ನು ಬೀದಿ ಬೀದಿಗಳಲ್ಲಿ ಓಣಿಗಳಲ್ಲಿ ಮಾರಾಟ ಮಾಡುತ್ತಿದ್ದರೆಂಬ ವಿದೇಶೀಯರ ವರದಿಯನ್ನು ಓದಿದಾಗ ಅಂತಹ ಅತ್ಯುನ್ನತ ಸ್ಥಿತಿ ತಲುಪಲು ನಮ್ಮ ಕನ್ನಡ ಭಾಷೆಯಿಂದಲೇ ಉತ್ತೇಜನ ಪಡೆದರೆಂಬುದನ್ನು ನಾವು ಅರಿತರೆ ಈಗಲೂ ಸಹ ನಮ್ಮ ಭಾಷೆಯಿಂದಲೇ ನವಚೈತನ್ಯ ಪಡೆಯಬಹುದು.

ಕಾಲದ ಓಟದಲ್ಲಿ ನಾವು ಇಂಗ್ಲೀಷ್ ಭಾಷೆ ಅಥವಾ ವಿಜ್ಞಾನ-ತಂತ್ರಜ್ಞಾನಗಳಿಗಿರುವ ಸಂಬಂಧವನ್ನು ಉದಾಸೀನ ಮಾಡುವಂತಿಲ್ಲ. ಆದರೆ ಅದು ಪೂರಕವಾಗಿರಬೇಕು. ಸತ್ತು ಹೋಗಿದ್ದ ಹೀಬ್ರೂ ಭಾಷೆಗೆ ಮರುಜನ್ಮ ನೀಡಿದ ಇಸ್ರೇಲಿಗಳ ರೋಚಕ ಕಥೆ ನಮ್ಮ ಕಣ್ಣು ತೆರೆಸಬೇಕಾಗಿದೆ. ಕನ್ನಡವನ್ನು ಯಾರು ಚೆನ್ನಾಗಿ ಕಲಿಯಬಲ್ಲರೋ, ಅಂಥಹವರಿಗೆ ಇಂಗ್ಲೀಷ್ ಕಲಿಯುವುದು ಬಹಳ ಸುಲಭವಾಗುತ್ತದೆ. ಇಂಗ್ಲೀಷ್ ಕಲಿಯಲೆಂದೇ ಕನ್ನಡವನ್ನು ವರ್ಜಿಸುವುದು ಸರ್ವಥಾ ಸಲ್ಲದು.

❖





# ಬಸವ-ಅಲ್ಲಮರ ಅನುಭಾವದಲ್ಲೊಂದು ಡಾ|| ಆಲ್ಬರ್ಟ್ ಐನ್‌ಸ್ಟೈನ್‌ರ ಜೀವನಾನುಭವದ 'ಸಾಪೇಕ್ಷತಾ ಸಿದ್ಧಾಂತ' (ಇ=ಎಂಸಿ²) *

-ಪೂಜ್ಯ ಶ್ರೀ ಯೋಗಿನಿ ಪ್ರಭುಶ್ರೀ ತಾಯಿ
(ಮೀನಾಕ್ಷಿ ಮಹಾಂತಗೌಡ ಪಾಟೀಲ)

ಇಡೀ ವಿಶ್ವದಲ್ಲಿ ಸಾಕಷ್ಟು ಜನ ಗುರುಗಳು, ಸಾಧು-ಸಂತರು ಆಗಿ ಹೋಗಿದ್ದಾರೆ. ಭಾರತದ ವಿಶ್ವಸಂಸ್ಕೃತಿಗೆ ವಿಭೂತಿ ಪುರುಷರು, ಶರಣರು ನೀಡಿರುವ ಕೊಡುಗೆ ಅಪಾರ. ಆದರೆ ಇಡೀ ಮನುಕುಲವನ್ನು ಗೆಲ್ಲುವಂತಹ ಒಂದು ದೈತ್ಯ ಶಕ್ತಿ ಇರಲೇಬೇಕು. ಆ ದೈತ್ಯ ಶಕ್ತಿಯೆ 'ವಿಶ್ವ ಗುರು ಬಸವಣ್ಣನವರು'. 'ಸಾಗರ ಮೇ ಗಾಗರ್ ಚುಪಾತಿ ಹೈ, ಮಗರ್ ಗಾಗರ್ ಮೇ ಸಾಗರ ನಹಿ ಚುಪಾತಿ' ಸಾಗರ ಜೈಸಾ ಹೈ ಹಮಾರ ಬಸವಜೀ'.

'ಬಸವಾ' ಎಂಬ ತ್ರಯಾಕ್ಷರದಲ್ಲಿ ಒಂದು ಮಂತ್ರಶಕ್ತಿ, ದೈವೀಶಕ್ತಿ ಇದೆ ಎಂದು ೧೨ನೆಯ ಶತಮಾನದಲ್ಲಿ ಶರಣರು ಮನಗಂಡಿದ್ದಾರೆ. ಅಂದಿನ ಅನುಭವಮಂಟಪ(UNO ಇದ್ದ ಹಾಗೆ) ವಾಸ್ತವವಾಗಿ ಪ್ರಥಮ ಪಾರ್ಲಿಮೆಂಟ್ ಅಥವಾ ಸಂಸತ್ ಅಧಿವೇಶನವಾಗಿತ್ತು. ನಿತ್ಯ ಬದುಕಿಗೆ ಬೇಕಾದ ಸಂವಿಧಾನವನ್ನು ಬರೆದಿಟ್ಟರು ನಮ್ಮ ಶರಣರು. ಅಲ್ಲದೆ ಸಾಮಾನ್ಯ ವ್ಯಕ್ತಿಯನ್ನು ಅಸಾಮಾನ್ಯ ವ್ಯಕ್ತಿಯನ್ನಾಗಿ, ದೈವೀಶಕ್ತಿಯನ್ನಾಗಿ ರೂಪಿಸಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಶಕ್ತಿಯನ್ನು ಕುರಿತು ಪ್ರಭುದೇವರ ವಚನ ಈ ರೀತಿ ಇದೆ.

***ವಚನ:ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು***
***ಬಯಲು ಬಯಲಾಗಿ ಬಯಲಾಯಿತಯ್ಯ***
***ಬಯಲು ಜೀವನ, ಬಯಲು ಭಾವನೆ;***
***ಬಯಲು ಬಯಲಾಗಿ ಬಯಲಾಯಿತಯ್ಯ***
***ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು***
***ನಾ ನಿಮ್ಮ ಪೂಜಿಸಿ ಬಯಲಾದೆ ಗುಹೇಶ್ವರಾ.***

ಈ ವಚನದಲ್ಲಿ 'ಬಯಲು ಎಂದರೆ 'ಶಕ್ತಿ' ಅಥವಾ 'ಪರಾತ್ಪರ ವಸ್ತು'ಎನ್ನುತ್ತೇವೆ. ವಿಶ್ವಾತ್ಮಚೇತನವಾದ (Universal soul) ಆ ಮಹಾಲಿಂಗದಿಂದ ಬಂದವರು ನಾವು. ಇದನ್ನೇ ವಿಜ್ಞಾನಿಗಳು (Big Bang theory) ಎಂದಿದ್ದಾರೆ. ಸಾಧನೆಯಿಂದ ಪರಶಿವ ತತ್ವದಲ್ಲಿ ಪುನಃ ಬೆರೆಯುವ ನಿಜಾನುಭವವೇ ಲಿಂಗಾಂಗ ಸಾಮರಸ್ಯ. (Soul and supreme soul hormony) ಅಥವಾ ಶಿವಯೋಗ ವೆನಿಸುವುದು. ಕೊನೆಗೆ ಆ ಶಕ್ತಿಯಲ್ಲಿಯೇ ಲೀನವಾಗುತ್ತೇವೆ. ಅದನ್ನೇ ಲಿಂಗೈಕ್ಯ ಅಥವಾ ಬಯಲು ಎನ್ನುತ್ತೇವೆ. ಈ ಮೇಲಿನ ವಚನದಲ್ಲಿ ಬಯಲು ಬಯಲನೆ ಬಿತ್ತಿ, ಬೆಳೆದು, ಬಯಲು ಬಯಲಾಗಿ ಬಯಲಾಯಿತು ಎಂದರೆ, ಈ ಕಾಯ(ಶರೀರ) ಆಕಾಯವಾಗುವುದು. ಪಂಚಭೂತಗಳಲ್ಲಿ ಒಂದಾಗುವುದು. ಇದನ್ನು (Walking temple talking god) ನಡೆದಾಡುವ ಮತ್ತು ಮಾತನಾಡುವ ದೇವರು ಎನ್ನುತ್ತಾರೆ. ಜಂಗಮಸ್ಥಿತಿ ಇದು. ಇಲ್ಲಿ ನಾನು-ನೀನು, ಲಿಂಗ ತಾರತಮ್ಯ ಎಂಬ ಭೇದ, ಏನೂ ಇಲ್ಲದಂತಹ ಸ್ಥಿತಿ ಇದು.

ಡಾ||ಆಲ್ಬರ್ಟ್ ಐನ್‌ಸ್ಟೈನ್ ಒಬ್ಬ ಸಾಧಕ. ಸಂಶೋಧಕ. ಸಂಶೋಧಕನ ಮನಸ್ಸಿಗೆ ಸಂಶೋಧನೆಯ ಉಸಿರು ಎನ್ನುವಂತೆ ಇವರ ಕೊಡುಗೆ ($E=mc^2$) ಈ ಪ್ರಖ್ಯಾತ ಸೂತ್ರದ ಮಂಡನೆಯಿಂದಿಗೆ ದ್ರವ್ಯರಾಶಿ ಮತ್ತು ಶಕ್ತಿ ಇವೆರಡೂ ವಸ್ತುವಿನ ಎರಡು ರೂಪಗಳು ಎಂಬುದನ್ನು ಸಾರಲಾಯಿತು. E=Energy (ಶಕ್ತಿ) M=Mass (ವಸ್ತುವಿನ ತೂಕ), C = ಬೆಳಕಿನ ವೇಗ. ಈ ಸಮೀಕರಣದ ಪ್ರಕಾರ ಶಕ್ತಿಯನ್ನು ವಸ್ತುವನ್ನಾಗಿ ಮಾರ್ಪಡಿಸಬಹುದು. ಅಥವಾ ವಸ್ತುವನ್ನು ಶಕ್ತಿಯನ್ನಾಗಿ ಬದಲಾಯಿಸಬಹುದು. ಈ ಶಕ್ತಿ ಮತ್ತು ವಸ್ತು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇಡೀ ವಿಶ್ವದ ಶಕ್ತಿಯ ಕೊರತೆಯನ್ನು ನೀಗಬಲ್ಲ ಅಣು ಶಕ್ತಿಯ ಉಪಯೋಗದ ಅರಿವಾದದ್ದು ಬೇರೆ ವಿಜ್ಞಾನಿಗಳಿಗೆ ಐನ್‌ಸ್ಟೈನ್‌ರಿಂದ ಎಂದು ಹೇಳಬಹುದು. ಸಾಪೇಕ್ಷತಾ

* ವಿಶ್ರಾಂತ ಪ್ರಾಧ್ಯಾಪಕರು, 'ಹೊಂಬೆಳಕು', ಮನೆ ನಂ. ೧೧೨-೧೧೩ ಓಂ ಹೈಸ್ಕೂಲ್ ಹತ್ತಿರ, ಧಾರವಾಡ-೫೮೦ ೦೦೩.

ಗಳಲ್ಲಿ ತಲ್ಲೀನರಾಗಿದ್ದ ಶಿವಯೋಗಿಗಳಿಗೆ ಆ ಲಿಂಗ ಒಲಿಯ ದಿದ್ದೀತೇ? ಆ ಲಿಂಗ ಸದಾ ಅವರಲ್ಲಿ ಸನ್ನಿಹಿತ. ಆಗ ಬಸವಣ್ಣನವರ ಈ ವಚನ;

*ನೀನೊಲಿದಡೆ ಕೊರಡು ಕೊನರುವುದಯ್ಯ*
*ನೀನೊಲಿದಡೆ ಬರಡು ಹಯನಹುದಯ್ಯ*
*ನೀನೊಲಿದಡೆ ವಿಷವೆಲ್ಲ ಅಮೃತವಹುದಯ್ಯ*
*ನೀನೊಲಿದಡೆ ಸಕಲ ಪಡಿ ಪದಾರ್ಥ*
*ಇದಿರಲ್ಲಿರ್ಪುವು ಕೂಡಲಸಂಗಮದೇವಾ*

ಅಥಣಿ ಶಿವಯೋಗಿಗಳ ಜೀವನಕ್ರಮದಲ್ಲಿ ಅನೇಕ ಪ್ರಸಂಗ ಗಳಲ್ಲಿ ಪ್ರಮಾಣವಾಗಿ ಪರಿಣಮಿಸಿದ್ದು ಸೋಜಿಗದ ವಿಷಯ ವಲ್ಲ. ಅದು ಸಹಜ.

**ಪ್ರಸಂಗ 2:** ಒಂದು ದಿನ ಒಬ್ಬ ಮುದುಕ ಜಂಗಮನು ಕೈಯಲ್ಲಿ ಕೋಲನ್ನು ಹಿಡಿದುಕೊಂಡು 'ಮುರಿಗೆಪ್ಪಾ, ಮುರಿಗೆಪ್ಪಾ! ಎಂದು ಎನ್ನುತ್ತ ಮಠದೊಳಗೆ ಪ್ರವೇಶಿಸಿದನು. ಅಲ್ಲಿ ಇದ್ದ ಜನರಿಗೆಲ್ಲ ಶಿವಯೋಗಿಗಳನ್ನು ಹೆಸರುಗೊಂಡು ಏಕವಚನದಲ್ಲಿ ಕರೆಯುತ್ತಿರುವ ಮುದುಕನನ್ನು ಕಂಡು ಸಖೇದಾಶ್ಚರ್ಯವಾಗಿ, ಸಭ್ಯ ಭಾಷೆಯಲ್ಲಿ ಮಾತನಾಡ ಬೇಕೆಂದು ಅವನಿಗೆ ಬುದ್ಧಿ ಹೇಳಿದರು. ಅದಾವದೂ ಪರಿಣಾಮ ಬೀರಲಿಲ್ಲ. 'ಎನ್ರಪ ನಾನೊಬ್ಬ ಮುದುಕ! ಅಂತಿಂಥ ಭಾಷೆ ನನಗೆ ತಿಳಿಯದು. ನಮ್ಮ ಮುರಿಗೆಪ್ಪನನ್ನು ಕಂಡು ಮಾತಾಡಿ ಹೋಗಲು ಬಂದಿರುವೆ. ಆತನನ್ನು ನನಗೆ ತೋರಿಸಿರಿ' ಎಂದು ಬೇಡಿಕೊಂಡ. ಅಷ್ಟರಲ್ಲಿ ಶಿವಯೋಗಿಗಳು ಹೊರಗೆ ಬಂದು ಆ ಜಂಗಮನನ್ನು ಕೈಹಿಡಿದು 'ದಯ ಮಾಡಿಸಿ' ಎಂದು ಕರೆದುಕೊಂಡು ಹೋದರು. ಆ ಜಂಗಮ ಸ್ವಲ್ಪ ಸುಧಾರಿಸಿಕೊಂಡ ಬಳಿಕ, ಶಿವಯೋಗಿಗಳು 'ಮಹಾಸ್ವಾಮಿ! ತಾವು ಬಹಳ ದಣಿದಿರು ವಿರಿ, ಸ್ನಾನ ಪೂಜೆಗಳನ್ನು ಮುಗಿಸಿಕೊಳ್ಳಬೇಕು' ಎಂದು ಕೇಳಿಕೊಂಡರು. ಆಗ ಆ ಜಂಗಮನು 'ಮುರಿಗೆಪ್ಪ ನನ್ನ ಬಯಕೆಯನ್ನು ಈಡೇರಿಸಿದರೆ ಮಾತ್ರ ಇಲ್ಲಿ ಪೂಜೆ ಮಾಡುವೆ. ಇಲ್ಲವಾದರೆ ಹೊರಟುಹೋಗುವೆ' ಎಂದು ಗಟ್ಟಿಗೆ ಹಚ್ಚಿ ಮಾತಾಡಿದನು. 'ತಮ್ಮ ಬಯಕೆಯನ್ನು ಶಿವನು ಪೂರೈಸುವನು, ತಡಮಾಡ ಬೇಡಿರಿ, ಸ್ನಾನ ಪೂಜೆಗೆ ದಯಮಾಡಿಸಿರಿ' ಎಂದು ಶಿವಯೋಗಿಗಳು ಭಿನ್ನಹ ಮಾಡಿಕೊಂಡರು. 'ಮುರಿಗೆಪ್ಪ ನನಗೆ ಇಂದು ಮಾವಿನ ಹಣ್ಣಿನ ಸೀಕರಣೆ ಮತ್ತು ಹೋಳಿಗೆ ಯನ್ನು ಸೇವಿಸುವ ಇಚ್ಛೆಯಾಗಿದೆ' ಎಂದು ಜಂಗಮ ಮತ್ತೆ ತನ್ನ ಬಯಕೆಯನ್ನು ಹೊರಗೆ ಹಾಕಿದನು. ಶಿವ ಯೋಗಿಗಳು ಶಾಂತಮನಸ್ಕರಾಗಿ ಶಿವನು ತಮ್ಮ ಬಯಕೆ ತೀರಿಸುವನೆಂದು ನಿವೇದಿಸಿಕೊಂಡರು.

ಅತ್ತ ಜಂಗಮನು ಸ್ನಾನಕ್ಕೆ ಹೋದನು. ಇತ್ತ ಒಬ್ಬನು ಬಿದಿರಿನ ಬುಟ್ಟಿಯನ್ನು ತಂದು ಶಿವಯೋಗಿಗಳಿಗೆ ಅರ್ಪಿಸಿದನು. ಮುಂಬೈಯಿಂದ ಮಾವಿನಹಣ್ಣಿನ ಪಾರ್ಸಲ್ ಬಂದಿದೆ ಬುದ್ಧಿ ಎಂದು ಅರಿಕೆಮಾಡಿಕೊಂಡನು. ಆಗ ಶಿವಯೋಗಿಗಳು ಹೀಗೆ ನುಡಿದರು. 'ನೋಡ್ರಪಾ! ಶಿವ ಅಲ್ಲಿ ಮಾವಿನ ಹಣ್ಣು ಕಳಿಸಿ ಇಲ್ಲಿಗೆ ಬಂದಿದ್ದಾನೆ'. ಬೆನ್ನ ಹಿಂದೆ ಒಬ್ಬ ಸದ್ಭಕ್ತ ಮಡಿಯಿಂದ ಮಾಡಿದ ಬಿಸಿಬಿಸಿ ಹೋಳಿಗೆಗಳ ಬುಟ್ಟಿಯನ್ನು ಶಿವಯೋಗಿಗಳಿಗೆ ಅರ್ಪಿಸಿದ ಅಷ್ಟರಲ್ಲಿ ಜಂಗಮ ಸ್ನಾನ ಪೂಜೆ ಮುಗಿಸಿಕೊಂಡು ಬಂದ. ನನ್ನ ಜೊತೆ ಉಳಿದ ಜಂಗಮರು ಪ್ರಸಾದ ತೆಗೆದುಕೊಳ್ಳ ಬೇಕೆಂದು ಆಗ್ರಹಿಸಿದ. ಎಲ್ಲರಿಗೂ ಆಕಾಲದಲ್ಲಿ ಆಗ ಮಾವಿನ ಹಣ್ಣಿನ ಸುಗ್ಗಿ ಅಲ್ಲ. ತಮಗೆ ಮಾವಿನಹಣ್ಣಿನ ಸೀಕರಣೆ ದೊರೆತದ್ದಕ್ಕೆ ಆಶ್ಚರ್ಯಪಟ್ಟರು.

ಪ್ರಸಾದ ಮುಗಿಸಿಕೊಂಡ ಜಂಗಮ ತಾನು ಸ್ವಲ್ಪ ಹೊತ್ತು ವಿಶ್ರಾಂತಿ ಪಡೆಯುವುದಾಗಿ ಹೇಳಿದ. ಶಿವಯೋಗಿಗಳು ಒಂದು ಏಕಾಂತ ಕೋಣೆಯಲ್ಲಿ ಸಿದ್ಧಪಡಿಸಿದ ಹಾಸಿಗೆಯ ಮೇಲೆ ಜಂಗಮನನ್ನು ಮಲಗಿಸಿ ಕದ ಮುಚ್ಚಿಕೊಂಡು ಯಾರೂ ಸಪ್ಪಳ ಮಾಡಬಾರದೆಂದು ಆದೇಶಿಸಿ, ಒಬ್ಬಿಬ್ಬರು ಕೋಣೆಯ ಬಳಿ ಇರಲಿ ಎಂದು ಹೇಳಿದರು. ಸ್ವಲ್ಪ ಕಾಲ ಗತಿಸಿದ ಬಳಿಕ ಶಿವಯೋಗಿಗಳು ಜಂಗಮ ಮಲಗಿದ್ದ ಕೋಣೆಗೆ ದಯಮಾಡಿಸಿದಾಗ ಜಂಗಮ ಕೋಣೆಯಲ್ಲಿರ ಲಿಲ್ಲ. ಎಲ್ಲರೂ 'ಏನಿದು, ಯಾರವರು? ಎಂದು ಆಶ್ಚರ್ಯ ಪಟ್ಟರು. ಶಿವಯೋಗಿಗಳು ರಹಸ್ಯವಾಗಿ ನಕ್ಕರು. ಎಲ್ಲ ಶಿವನ ಲೀಲೆ!.

'ಸೃಷ್ಟಿಕರ್ತನಾದ ಶಿವನನ್ನು ನಂಬಿಕೊಂಡವರಿಗೆ ಏನೂ ಕೊರತೆ ಬೀಳುವುದಿಲ್ಲ. ಸದಾ ಆತನ ಧ್ಯಾನ ಮಾಡುವವರಿಗೆ ಕೊರತೆಯು ಇಲ್ಲ, ಕೊಟ್ಟಕೊಟ್ಟಂತೆ ಹೆಚ್ಚುತ್ತಾ ಹೋಗುತ್ತದೆ' ಎಂದು ಶಿವಯೋಗಿಗಳು ಎಲ್ಲರನ್ನೂ ಆಶೀರ್ವದಿಸಿದರು.

❖







## ನಮಗೆ ಕನ್ನಡ ಬೇಕೆ ?

-ಎಸ್. ರೇಣುಕಾರಾಧ್ಯ *

*ಕನ್ನಡ ಎನೆಕುಣಿದಾಡುವುದೆನ್ನದೆ*
*ಕನ್ನಡ ಎನೆ ಕಿವಿ ನಿಮಿರುವುದು*
*ಕಾಮನ ಬಿಲ್ಲನು ಕಾಣುವ ಕವಿಯೊಲು*
*ತೆಕ್ಕನೆ ಮನ-ಮೈ ಮರೆಯುವುದು!*

*'ನಿನ್ನೊಳಂದು ಸಂದುದರ್ಥ ಭರತದೇಶಕಂ'*
*ಮೊದಲು ತಾಯ ಹಾಲ ಕುಡಿದು*
*ಲಲ್ಲೆಯಿಂದ ತೊದಲಿ ನುಡಿದು*
*ಕೆಳೆಯರೊಡನೆ ಬೆಳೆದು ಬಂದ ಮಾತದಾವುದು?*
*ನಲ್ಲೆಯೊಡನೆ ಸರಸ ತಂದ ಮಾತದಾವುದು!*
*ರಾಮನಿಲ್ಲಿ ಬಂದನೆ, ಕನ್ನಡದಳಕೂಡಿಸಿ*
*ಖಳ ದಶಾಸ್ಯನಂ ಕೊಂದನೆ!*
*'ದಯವಿಲ್ಲದ ಧರ್ಮವಾವುದಯ್ಯ?'*
*'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ'*

ಮುಂತಾದ ಮೇಲಿನ ವಾಕ್ಯಗಳನ್ನು ಓದುವಾಗ-ಓದಿದಾಗ ಇಡೀ ಕನ್ನಡ ನಾಡು-ಜನತೆ ಎಂತಹ ಸಂಮೃದ್ಧ ಜೀವನ ಕಟ್ಟಿಕೊಂಡಿದ್ದರು ಎಂಬುದು ನಮಗೆ ಅರ್ಥವಾಗಬೇಕು. ಕನ್ನಡದ ಕವಿಗಳು, ಗಾಯಕರು, ಶಿಲ್ಪಿಗಳು, ಸಾಹಿತಿಗಳು, ಆಚಾರ್ಯರುಗಳು, ಸಾಧಕರು, ಸಿದ್ಧಿಪುರುಷರು, ಶೂರರು, ಕಲಿಗಳು-ಕವಿಗಳು(Writers and fighters) ರಾಜರು ವಿಜ್ಞಾನೇಶ್ವರಗಳು, ಶ್ರಮಿಕರು, ವಿಜ್ಞಾನಿಗಳು, ನ್ಯಾಯ ಪರಿಣತವೇತ್ತರು, ಶರಣರು, ದಾಸರು ಇವರು ಸೃಷ್ಟಿಸಿದ ಲೌಕಿಕಾಲೌಕಿಕ ಸಂಪತ್ತು-ವಾಙ್ಞಯಸಂಪತ್ತು ಜಗತ್ತಿನ ಯಾವ ಭಾಗದವರ ಸಾಧನೆಗಿಂತಲೂ ಮಿಗಿಲಾಗಿತ್ತು.

ಯಾವುದೇ ಒಂದು ರಾಷ್ಟ್ರ ಮುಂದೆ ಬರಬೇಕಾದರೆ ಅಭಿವೃದ್ಧಿಯಾಗಬೇಕಾದರೆ ತನ್ನತನದಿಂದ ಅರ್ಥಾತ್ ತನ್ನ ಅಂತಸ್ಸತ್ವದಿಂದ ಮಾತ್ರ ಸಾಧ್ಯ ಎರವಲು ಪಡೆದು ಅಭಿವೃದ್ಧಿ ಹೊಂದುವುದು ಸಾಧ್ಯವಿಲ್ಲ.

ಇಂತಹ ಪರಿಸ್ಥಿತಿಯಲ್ಲಿ ಇಂದು ಕನ್ನಡಿಗ ಡೋಲಾಯ ಮಾನ ಸ್ಥಿತಿಗೆ ತಲುಪಿದ್ದಾನೆ. ತನ್ನ ಪ್ರಗತಿಯೇನಿದ್ದರೂ ಇಂಗ್ಲೀಷ್ ಭಾಷೆಯಿಂದ ಮಾತ್ರ ಸಾಧ್ಯ ಎನ್ನುವ ಹಂತ ತಲುಪಿದ್ದಾನೆ. ಈ ವಿಚಾರಕ್ಕೆ ಪೂರಕವಾಗಿ ನಮ್ಮ ಸರ್ಕಾರ ಗಳೂ, ಕಾರ್ಪೋರೇಟ್ ಸಂಸ್ಥೆಗಳೂ ಸಮಾಜದಲ್ಲಿ ಪ್ರತಿಷ್ಠಿತ ರೆನಿಸಿರುವವರೂ ಕಾರಣರೆಂದರೆ ಅತಿಶಯೋಕ್ತಿಯಲ್ಲ.

ಇನ್ನು ನಮ್ಮ ಶಿಕ್ಷಣನೀತಿಯಂತೂ ಎಲ್ಲಿಗೆ ತಲುಪಿದೆ ಯೆಂದರೆ, ಇಂದಿನ ಯುವಜನರು ನಿರಾಶರಾಗಿದ್ದಾರೆ. ಯಾರೋ ಉಳ್ಳವರು ಡಿಗ್ರಿ ಸರ್ಟಿಫಿಕೇಟ್‌ಗಳನ್ನು ಪಡೆದು ಮೇಲ್ದರ್ಜೆಯ ಹುದ್ದೆಗಳನ್ನು ಗಿಟ್ಟಿಸಿಕೊಳ್ಳುತ್ತಾರೆ. ಇದಕ್ಕೆಲ್ಲಾ ಕಾರಣ ಅವರಿಗೆ 'ಇಂಗ್ಲೀಷ್' ಭಾಷೆಯ ಬಗ್ಗೆ ಅಲ್ಪ-ಸ್ವಲ್ಪ ಜ್ಞಾನವಿರುವುದೇ ಆಗಿದೆ.

ಇಂದು ಗ್ರಾಮಾಂತರ ಪ್ರದೇಶಗಳಲ್ಲೂ ಸಾಮಾನ್ಯ ಜನರೂ ಸಹ ತಮ್ಮ ಮಕ್ಕಳು ಕನ್ನಡ ಶಾಲೆಗಳಿಗೆ ಕಳಿಸಲಾಗುತ್ತಿಲ್ಲ. ನಾಯಿಕೊಡೆಗಳಂತೆ ಗಲ್ಲಿಗೊಂದು-ಬೀದಿಗೊಂದು ತೆರೆದುಕೊಂಡಿರುವ ಇಂಗ್ಲೀಷ್ ಶಾಲೆಗಳಿಗೇ ತಮ್ಮ ಮಕ್ಕಳನ್ನು ಕಳುಹಿಸುತ್ತಿದ್ದಾರೆ. ಶಾಲೆಗೆ ಬರುವ ಮೊದಲ ದಿನವೇ, ನಾವು ಮಗುವಿಗೆ ಕಲಿಸುವುದು-'ಸಮವಸ್ತ್ರ'ದಲ್ಲಿ ಬರಬೇಕು. 'ಷೂ'ಗಳನ್ನು ಕಡ್ಡಾಯವಾಗಿ ಧರಿಸಬೇಕು-ಇಲ್ಲಿಂದ ಪ್ರಾರಂಭವಾದದ್ದು ಮುಂದೆ ಆ ವಿದ್ಯಾರ್ಥಿ ತನ್ನ ಮನೆತನದ ಕಸುಬುಗಳನ್ನು ಕಲಿಯದೆ-ಇತ್ತ ಉತ್ತಮ ಜ್ಞಾನವನ್ನು ಆಂಗ್ಲಭಾಷೆಯ ಮೂಲಕ ಪಡೆಯಲಾಗದೆ ಮುಂದೆ ತ್ರಿಶಂಕು ಸ್ಥಿತಿಗೆ ದೂಡಲ್ಪಡುತ್ತಾನೆ.

ಇಂಗ್ಲೀಷ್ ಕಲಿತವರ ಮನಸ್ಥಿತಿ ಹೇಗಿರುತ್ತದೆ ಎನ್ನುವುದಕ್ಕೆ ಇತ್ತೀಚಿನ ಒಂದು ಜ್ವಲಂತ ನಿದರ್ಶನವೆಂದರೆ 'ವಾಲ್‌ಸ್ಟ್ರೀಟ್' ಚಳುವಳಿ. ರಾಜ ಪ್ರಭುತ್ವದಿಂದ ಮರಳಿ, ಪ್ರಜಾಪ್ರಭುತ್ವ ಸ್ಥಾಪಿಸಿಕೊಂಡು ಜನರೆಲ್ಲರೂ ಸಮಾನ ವ್ಯವಸ್ಥೆ-ಸಂಪತ್ತಿನ ಸಮಾನ ಹಂಚಿಕೆ-ಇವುಗಳ ಕನಸು ನುಚ್ಚು ನೂರಾಗಿದೆ. ಅಮೆರಿಕಾದಂತಹ ಪ್ರಜಾಪ್ರಭುತ್ವ ದೇಶದಲ್ಲಿಯೇ ಸಾಮಾನ್ಯ ಜನತೆ ಕಾರ್ಪೋರೇಟ್ ದಿಗ್ಗಜರ ಹಿಡಿತಕ್ಕೆ ಸಿಕ್ಕಿ ಅನೇಕ ಸಂಕಟಗಳನ್ನು ಎದುರಿಸುತ್ತಿರುವುದು ನಮ್ಮ ಕಣ್ಣೆದುರೇ ನಡೆಯುತ್ತಿದೆ.

* ಶ್ರೀನಗರ, ಶ್ರೀ ಸಿದ್ಧಗಂಗಾ ಮಠದ ರಸ್ತೆ, ತುಮಕೂರು.

ಚುನುಂಡು! ಅನಗ ಅನಗ ವೇಮುತೀಯ ನಗುನು! ಸಾಧನ ಮುನ ಪನುಲು ಸಮಕೂರು ಧರಲೋನ! ವಿ.ವಿ. ವೇಮ) ಹಾಡುತ್ತ ಹಾಡುತ್ತ ರಾಗ ಅತಿ ನಯವಾಗುತ್ತದೆ. ತಿನ್ನುತ್ತ ಬೇವು ಕೂಡ ಸಿಹಿ ಆಗುತ್ತದೆ. ಸಾಧನೆಯಿಂದ ಎಲ್ಲ ಕೆಲಸಗಳೂ ಒದಗು ಬರುತ್ತವೆ. 'ಮನಸ್ಸಿದ್ದರೆ ಮಾರ್ಗ' ಎನ್ನುವಂತೆ ಸಾಧನೆಯಿಂದ ಎಂಥ ಕೆಲಸವನ್ನಾದರೂ ಮಾಡಬಹುದು. ಬೇವು ಕೂಡಾ ಸಿಹಿಯಾಗುತ್ತದೆಯೆಂದರೆ ಒಳ್ಳೆಯದು ಇನ್ನೂ ಒಳ್ಳೆಯದಾಗುತ್ತದೆ. ಒಳ್ಳೆಯ ಕಾರ್ಯದಲ್ಲಿ ಪ್ರತಿಯೊಬ್ಬ ಮನುಷ್ಯನೂ ತಲ್ಲೀನನಾಗಬೇಕೆಂದು ಈತನ ಅಭಿಪ್ರಾಯವಾಗಿದೆ.

ಶೈವ, ವೈಷ್ಣವ ಎಂಬ ವ್ಯತ್ಯಾಸವಿಲ್ಲದೆ ಆಧ್ಯಾತ್ಮವನ್ನು ಸಮಚಿತ್ತ ದಿಂದ ನಿರೂಪಿಸಿದ ಯೋಗಿ ವೇಮನ, ಬಸವಣ್ಣನವರಂತೆಯೇ ಒಂದು ಪದ್ಯದಲ್ಲಿ 'ಕಾಲೇ ಕಂಬ ದೇಹವೇ ದೇಗುಲ' ಎಂಬ ಭಾವದಂತೆಯೇ ಒಂದು ಪದ್ಯದಲ್ಲಿ ಹೀಗೆ ಹೇಳಿದ್ದಾನೆ– (ಅಮಲ ಮನ ಪಲಕು ಅಭಿಷೇಕ ವಾರಿಧಿ! ತನುವು ದೇವಳಂಬು ತಾಲ್ಮಿನೊಂದಿ! ಯಾತ್ಮ ಶಿವನಿ ಚೇರ್ಚು ನಾತಡೆ ಶಿವಯೋಗಿ! ವಿ.ವಿ.ವೇಮ) ನಿರ್ಮಲವಾದ ನುಡಿ ಅಭಿಷೇಕ ವಾರಿಧಿ, ದೇಹವೇ ದೇವಾಲಯ, ತಾಳ್ಮೆಯಿಂದ ಆತ್ಮನನ್ನು ಶಿವನೊಂದಿಗೆ ಸೇರಿಸುವವನೇ ಶಿವಯೋಗಿ ಎಂದಿದ್ದಾನೆ. ಬಸವಣ್ಣನವರ ವಚನಕ್ಕೂ ಈತನ ವಚನಕ್ಕೂ ಬಹಳ ಸಾಮ್ಯತೆ ಯಿದೆ. ಹಾಗೆಯೇ ಸರ್ವಜ್ಞನ ವಚನಗಳ ಅನುಕರಣೆಯೂ ಇದ್ದಂತೆ ತೋರುತ್ತದೆ. ಇವರಿಬ್ಬರೂ ಒಬ್ಬರನ್ನೊಬ್ಬರು ಸಂಧಿಸಿದ್ದುದರಿಂದ ವಾದ–ಸಂವಾದ ಮಾಡಿ ಬರೆದಿರಬೇಕು ಕಾರಣ ಅವರಿಬ್ಬರ ವಿಚಾರಗಳು ಹೋಲಿಕೆಗಳಿದ್ದುದು ಸಹಜ!

ಒಟ್ಟಿನಲ್ಲಿ ವೇಮನ ಯೋಗಿ, ಮಹಾಯೋಗಿ, ಅನೇಕದಲ್ಲಿ ಏಕವನ್ನು ಕಂಡವನು 'ಏಕಂ ಸತ್ ವಿಪ್ರಾ ಬಹುಧಾವದಂತಿ' ಎಂದು ಹೇಳುವಂತೆ ಇರುವ ಒಂದು ಸತ್ಯವನ್ನು ಕುರಿತು ಬಗೆಬಗೆಯಾಗಿ ಹೇಳಬಹುದೆಂಬುದನ್ನು ವೇಮನ ಸಾರ್ಥಕ ಗೊಳಿಸಿದ್ದಾನೆ. ರುಚಿಗಳು ಆರು ಬೇರೆ ಬೇರೆ. ಸಾರ ಮಾತ್ರ ಒಂದೇ. ಹಾಗೆಯೇ ನಿತ್ಯ ನಿಷ್ಠೆಗಳು ಬೇರೆ ಬೇರೆ. ಸತ್ಯ ಒಂದೇ. ಪರಮ ಋಷಿಗಳು ಬೇರೆ, ಅನುಭಾವಿ ಒಬ್ಬನೇ ಎನ್ನುತ್ತಾನೆ ವೇಮನಯೋಗಿ.

❖

## ಬಸವ ವಚನಾಮೃತ

**ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು**
**ನೆನೆದು ಮೃದುವಾಗಬಲ್ಲುದೇ?**
**ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯ**
**ಮನದಲ್ಲಿ ದೃಢವಿಲ್ಲದನ್ನಕ್ಕ ?**
**ನಿಧಾನವ ಕಾಯ್ದಿರ್ದ ಬೆಂತರನಂತೆ....**
**ಅದರಿ ವಿಧಿ ಎನಗಾಯಿತ್ತು ಕೂಡಲಸಂಗಮದೇವ**

ಊರ ಹೊರಗೆ ನಟ್ಟೊಂದು ಕಲ್ಲುಕಂಭದಡಿಯಲ್ಲಿ ನವನಿಧಿಯಿದೆ. ಅದಕ್ಕೆ ಬ್ರಹ್ಮರಾಕ್ಷಸನ ಸರ್ಪಗಾವಲಿದೆ–ಯಾರದರೂ ಆ ನಿಧಿಯನ್ನೆತ್ತಲು ಪ್ರಯತ್ನಿಸಿದ್ದೇ ಆದರೆ ಆ ಬ್ರಹ್ಮರಾಕ್ಷಸನವರನ್ನು ರಕ್ತಕಕ್ಕಿ ಸಾಯುವಂತೆ ಮಾಟ ಮಾಡುವನೆಂಬುದೊಂದು ನಂಬಿಕೆ. ಆ ಬ್ರಹ್ಮರಾಕ್ಷಸನಾದರೋ ಇತ್ತ ಮಾನವನಾಗಲಿ, ಅತ್ತ ದೇವತೆಯಾಗಲಿ ಅಲ್ಲವಾಗಿ–ಅಂತರ ಬೆಂತರವಾಗಿ–ತನ್ನದೇ ಅದೊಂದು ದೇಹವಿಲ್ಲವಾಗಿ ಆ ನಿಧಿಯನ್ನು ತಾನೂ ತೆಗೆಯಲಾರದೆ, ಇತರರು ತೆಗೆಯಲೂ ಬಿಡದೆ– ಆ ನವನಿಧಿಯನ್ನೆಲ್ಲ ವ್ಯರ್ಥಗೆಡವುತ್ತಿರುವನೆಂಬುದು ಒಂದು ಸಾಮಾನ್ಯ ಪ್ರತೀತಿ ಯಾದರೂ–ಅದೊಂದು ಅಪೂರ್ವ ಪ್ರತಿಮೆಯಾಗಿ ಈ ವಚನದಲ್ಲಿ ಬಳಕೆಯಾಗಿದೆ.

ಬಸವಣ್ಣನವರು ಕೂಡಲಸಂಗಮದಲ್ಲಿ ಕೆಲವು ಕಾಲ ಅರ್ಚಕರಾಗಿದ್ದರೆಂಬುದು ಹರಿಹರನ ಬಸವರಾಜದೇವರ ರಗಳೆಯಿಂದ ತಿಳಿದು ಬರುವ ಪ್ರಸಿದ್ಧ ವಿಷಯವೇ ಆಗಿದೆ. ಆ ಅವಧಿಯ ಒಂದು ಸಂದರ್ಭವನ್ನು ಕುರಿತಂತಿರುವುದು ಈ ವಚನ.

ಅರ್ಚಕನು ಪ್ರಥಮ ಮಹಾಪೂಜೆಯನ್ನು ಮಾಡಿ ಮುಗಿಸುವವರೆಗೆ ಬೇರಾವ ಭಕ್ತರೂ ಗರ್ಭಗುಡಿಗೆ ಪ್ರವೇಶಿಸಿ ಆ ಲಿಂಗವನ್ನು ಪೂಜಿಸುವಂತಿಲ್ಲ. ಆ ಅರ್ಚಕನೂ ಮನಃಪೂರ್ವಕವಾಗಿ ಪೂಜಿಸುವುದಿಲ್ಲ. ಇಂಥ ಕಸುಬಿನ ಪೂಜಾಕ್ರಿಯೆ(ಶಿವಾಲಯದ ಒಳಗಾಗಲಿ ಹೊರಗಾಗಲಿ) ಸಾರ್ವಜನಿಕವಾಗಿ ಅದ್ಭುತವೆನಿಸೀತೇ ಹೊರತು, ಪೂಜಕನ ಹೃದಯಕ್ಕೆ ಮಾರ್ದವತೆಯನ್ನು ಒದಗಿಸಿಕೊಡುವುದಿಲ್ಲ. ಈ ಮಾತೇ ಇಷ್ಟಲಿಂಗಪೂಜೆಗೂ ಅನ್ವಯಿಸುವುದು.

ಶಿವಪೂಜಾಗೃಹದಲ್ಲಿ ತನ್ನ ಇಷ್ಟಲಿಂಗದ ಪೂಜೆಯಲ್ಲಿ ತೊಡಗಿದ ಕಲ್ಲು ಹೃದಯದವನಿಂದ ಪೂಜೆ ದೀರ್ಘಕಾಲೀನವಾದಷ್ಟೂ–ಮನೆಯ ಮಿಕ್ಕ ಸಾಚಾ ಜನರ ಪೂಜಾ ಸಮಯವನ್ನು ಕಸಿದುಕೊಂಡಂತೆಯೇ ಸರಿ. ಮನೆಯಲ್ಲಿರುವ ಪೂಜಾಗೃಹಗಳು ಸಾಮಾನ್ಯವಾಗಿ ಕಿರಿದಾಗಿರುವವೆಂಬುದನ್ನಿಲ್ಲಿ ಮರೆಯಬಾರದು.

–ಡಾ॥ ಎಲ್. ಬಸವರಾಜು, ಮೈಸೂರು







## ಅಥಣಿ ಶಿವಯೋಗಿಗಳು ಕೆಲವು ಸಂಗಗಳು ಮತ್ತು ಪ್ರಸಂಗಗಳು

–ಬಸವರಾಜ ಪುರಾಣಿಕ *

'ಬಸವಣ್ಣನವರ–ಅಪ್ಪನವರ ವಚನಗಳ ಅಸೀಮ ಭಕ್ತಿ ಹೊಂದಿದ್ದ ಅಥಣಿಯ ಶಿವಯೋಗಿಗಳು ಅವುಗಳನ್ನು ಅಂತರ್ಗತ ಮಾಡಿಕೊಂಡಿದ್ದರು. ಅವರ ನುಡಿಯಲ್ಲಿ ಹಾಗೂ ನಡೆಯಲ್ಲಿ ಶರಣವಾಣಿ ನುಡಿಯುತ್ತಿತ್ತು ಹಾಗೂ ನಡೆಯುತ್ತಿತ್ತು.

ಪ್ರಸಂಗ–1 : ಒಮ್ಮೆ ಮಠದಲ್ಲಿ ಮಹಾಗಣಾರಾಧನೆ ನಡೆಯಬೇಕಾಗಿದ್ದಿತು. ಮಾರನೆಯ ದಿನ ಬೆಳಗಾದರೆ ಸಹಸ್ರಾವಧಿ ಜನಸಮೂಹ ನೆರೆಯುವುದಿದ್ದಿತು. ಅವರಿಗೆಲ್ಲ ಪ್ರಸಾದ ವಿನಿಯೋಗವಾಗಬೇಕು. ಆದರೆ ಮಠದಲ್ಲಿ ಒಡಕು ಕಾಳಿಲ್ಲ. ಲಿಂಗಸ್ವರೂಪಿ ಶಿವಯೋಗಿಗಳಿಗೆ ಅಂಗಸ್ವರೂಪಿಗಳಾಗಿದ್ದ ಹಾಗೂ ಮಠದ ಅಧಿಕಾರಿಗಳಾಗಿದ್ದ ಸಿದ್ಧಲಿಂಗಸ್ವಾಮಿಗಳವರಿಗೋ 'ಕಾ ಗತಿಃ' ಎಂಬ ದಿಗಿಲು. ರಾತ್ರಿ ಹನ್ನೊಂದು ಗಂಟೆಯವರೆಗೂ ಇದೇ ಚಿಂತೆಯಲ್ಲಿ ಪರಿತಪಿಸಿದರು. ಇಷ್ಟಾದರೂ ಎಲ್ಲಿಂದಲೂ ಒಡಕು ಕಾಳೂ ಬರಲಿಲ್ಲ. ಅವರ ಶಕ್ತಿ ಮೀರಿತು. ಶಿವಯೋಗಿಗಳ ಸನ್ನಿಧಿಗೆ ಧಾವಿಸಿದರು. ಚಿಂತೆಯಿಂದ ಉದ್ವಿಗ್ನರಾಗಿ ಬಂದಿದ್ದ ಅವರನ್ನು ಅಪ್ಪನವರ ವಚನ ಓದುತ್ತ ಕುಳಿತಿದ್ದ ಶಿವಯೋಗಿಗಳು ಕಂಡು ಅನುದ್ವಿಗ್ನರಾಗಿಯೇ ನುಡಿದರು. 'ಇದೇನು ಅಪರಾತ್ರಿಯಲ್ಲಿ ಗಮನ?' ಸಿದ್ಧಲಿಂಗಸ್ವಾಮಿಗಳು ತಮ್ಮ ಪಾಡನ್ನು ತೋಡಿಕೊಂಡರು. ಮುಗುಳು ನಗುತ್ತಾ ಶಿವಯೋಗಿಗಳು ನುಡಿದರು; 'ಸಿದ್ಧಲಿಂಗಪ್ಪನವರೇ, ಕಳೆದ ಇಪ್ಪತ್ತು ವರ್ಷಗಳಿಂದಲೂ ಈ ಮಠದಲ್ಲಿ ನಿತ್ಯ ದಾಸೋಹ ನಡೆದಿದೆ. ಅದನ್ನು ನೀವೇ ನಡೆಸಿರುವರೆಂದು ನಿಮಗೆನಿಸುತ್ತಿದ್ದರೆ ಕುಳಿತು ರಾತ್ರಿಯೆಲ್ಲ ಚಿಂತೆ ಮಾಡಿರಿ. ನಡೆಸಿದವ ನಾನಲ್ಲ, ಶಿವನು ಎಂಬ ನಂಬಿಕೆ ಇದ್ದರೆ ಹೋಗಿ ನಿಶ್ಚಿಂತರಾಗಿ ಮಲಗಿರಿ!' ಸಿದ್ಧಲಿಂಗಸ್ವಾಮಿಗಳಿಗೆ ಮುಂದೆ ಮಾತೇ ಹೊರಡಲಿಲ್ಲ. ಹೋಗಿ ಹೊದ್ದು ಮಲಗಿಬಿಟ್ಟರು.

ಬೆಳಗಾಗುತ್ತಲೇ ಒಂದು ರೇಲ್ವೇ ರಸೀದಿ ಸಿದ್ಧಲಿಂಗ ಸ್ವಾಮಿಗಳವರಿಗೆ ತಲುಪಿತು. ಬೆಂಗಳೂರಿನ ಭಕ್ತರೊಬ್ಬರು ದಾಸೋಹಕ್ಕಾಗಿ ಒಂದು ವಾಗನ್ ತುಂಬ ಅಕ್ಕಿ ಕಳಿಸಿದ್ದರು. ಸಕಾಲಕ್ಕೆ ಶಿವನು ಕೊಟ್ಟನೆಂದು ಸಿದ್ಧಲಿಂಗಸ್ವಾಮಿಗಳವರಿಗೆ ಹಿಡಿಸಲಾರದಷ್ಟು ಹಿಗ್ಗಾಯಿತು'. ಓಡಿಹೋಗಿ ಶಿವಯೋಗಿಗಳಿಗೆ ಈ ಸುದ್ದಿ ತಿಳಿಸಿದರು. ಮತ್ತೆ ಮೃದುವಾಗಿ ನಕ್ಕು ಶಿವಯೋಗಿಗಳು ನುಡಿದರು; 'ಸಿದ್ಧಲಿಂಗಪ್ಪನವರೆ, ನಿನ್ನೆ ಶಿವನು ಕೊಡಲು ಸ್ವಲ್ಪ ತಡಮಾಡಿದನೆಂದು ಕುಗ್ಗಿ ಹೋಗಿದ್ದಿರಿ, ಇಂದು ಕೊಟ್ಟನೆಂದು ಹಿಗ್ಗಿ ನಲಿದಾಡುತ್ತಿರುವಿರಿ. ಈ ಹಿಗ್ಗುಕುಗ್ಗುಗಳ ನಡುವೆ ಎಂದು ತಗ್ಗಿದೆ. ಈ ಹಿಗ್ಗು–ಕುಗ್ಗು ಈ ಎರಡರಲ್ಲಿ ಯಾವ ಕಡೆಯಿಂದ ಬಂದರೂ ಆ ತಗ್ಗಿನಲ್ಲಿ ಬೀಳುವುದು ತಪ್ಪುವುದಿಲ್ಲ. ಆದುದರಿಂದ ಈ ಎರಡೂ ಹಾದಿ ಬಿಟ್ಟು ಸದಾ ಸಮಾಧಾನದ ಬೀದಿಯಲ್ಲಿ ತಿರುಗಿರಿ'. ಶಿವಯೋಗಿಗಳ ಈ ಉಪದೇಶದಲ್ಲಿ ಸರ್ವಧರ್ಮಗಳ ಸಾರವಿದೆ, ಸರ್ವಸಮಸ್ಯೆಗಳ ಪರಿಹಾರವಿದೆ.

***'ನಂಬಿ ಕರೆದೊಡೋ ಎನ್ನನೆ ಶಿವನು?'***

ಈ ಬಸವ ಸೂತ್ರವು ಜೀವನದ ದಾರಿದೀಪ. ಗುರುಲಿಂಗ ಜಂಗಮಾರಾಧನೆಯಲ್ಲಿ ನಿರತನಾದವನಿಗೆ ಮೊದಲ ಅರ್ಹತೆ ಎಂದರೆ ನಂಬಿಗೆ. ದೇವರಲ್ಲಿ ಅಚಲ ನಂಬಿಗೆ, ತನ್ನಲ್ಲಿ ಪರಿಪೂರ್ಣ ನಂಬಿಗೆ ಇರುವಾಗ ಯಾವುದರ ಭೀತಿ? ಯಾವುದರ ಕೊರತೆ? ನಂಬಿಗೆ ಆ ಪ್ರಕಾರ ಗಟ್ಟಿಗೊಳಿಸಿಕೊಳ್ಳುವ ಸಾಧನೆಯು ಅವಿರತವಾದದ್ದು. ಜೀವನದಲ್ಲಿ ಕಾಣಿಸಿಕೊಳ್ಳುವ ಎಷ್ಟೋ ಪ್ರಸಂಗಗಳು ಎಂಥವರನ್ನೂ ಸಹ ಹೊಯ್ದಾಡಿಸಲು ಸಾಧ್ಯ ಮತ್ತು ಸಹಜ ಅಂತಹ ಏರಿ ಬರುವ ಸಮಸ್ಯೆಗಳನ್ನು, ಕೆಳಕ್ಕೆ ಜಗ್ಗುವ ಚಿಂತೆಗಳನ್ನು ಸಮಾಧಾನದಿಂದ ಎದುರಿಸಿ ಸಮತೆಯನ್ನು ಸಾಧಿಸಿದವನ ನಂಬಿಗೆ ಸದಾ ಅಚಲನಾಗಿ ಪರಿಣಮಿಸುತ್ತದೆ. ಆಗ,

**'ನೆರೆ ನಂಬಿದೆಯಾದಡೆ ತನ್ನನೀವ ಕೂಡಲಸಂಗಮದೇವಾ'**

ಬಸವಣ್ಣನವರ ಈ ಮಾತು ಅಥಣಿ ಶಿವಯೋಗಿಗಳ ಅಂತರ್ಯವನ್ನು ತುಂಬಿಕೊಂಡಿತ್ತು. ಅಂಥ ಅಪೂರ್ವವಾದ ನಿಧಿಯನ್ನು ತಮ್ಮ ಅಂತರಂಗ ಹಾಗೂ ಆತ್ಮಸಂಗಗಳಲ್ಲಿ ತುಂಬಿಕೊಂಡು ಅರ್ಚನೆ, ಅರ್ಪಣೆ ಹಾಗೂ ಅನುಭಾವ

* 1337, 3ನೇ ಕ್ರಾಸ್, ಮಾಗಡಿ ರೋಡ್, ಕೆಎಚ್‌ಬಿ ಕಾಲೋನಿ, ಬೆಂಗಳೂರು–560 070.

ಅನುಭಾವದ ಜ್ಞಾನಗೀತೆಗಳು ದೊರೆಯುತ್ತಿರಲಿಲ್ಲ. ಒಬ್ಬ ಉನ್ಮತ್ತ ಕಾಮುಕನನ್ನು ಉದಾತ್ತ ಯೋಗಿಯನ್ನಾಗಿ ಉಪಾಯದಿಂದಲೇ ಅಹಿಂಸೆಯಿಂದಲೇ ಪರಿವರ್ತಿಸಿದ ಮಲ್ಲಮ್ಮ ನಾರಿ ಲೋಕದ ದಾರಿದೀಪ, ನಾರಿಕುಲಕ್ಕೆಲ್ಲ ಗೌರವ ತಂದ ಮಹಾಮಾತೆ, ಪೂತೆ, ಖ್ಯಾತೆ. ಅಂತೆಯೇ ಹಳ್ಳಿಗರೂ 'ಹೆಣ್ಣುಮಕ್ಕಳೊಳಗೆ ಹೇಮರೆಡ್ಡಿ ಮಲ್ಲಮ್ಮ ಮೇಲು, ತನ್ನ ದೇಹವ ಪುಡಿ ಪುಡಿ ಮಾಡಿ ಕಟ್ಟಿಸ್ಯಾಳ ಪರ್ವತ ಮಲ್ಲನ ಹೊಸ ಕಳಸ' ಎಂದು ಹಾಡುತ್ತಿದ್ದಾರೆ ಈಗಲೂ. ಈ ಘಟನೆಯಿಂದ ಪರಿವರ್ತಿತನಾದ ವೇಮನನು ತಾನು ವೇಮನಮಹಾಯೋಗಿಯಾದ ಸನ್ನಿವೇಶವನ್ನು ಈ ರೀತಿಯಾಗಿ ಅನುಭಾವ ಗೀತೆ ರಚಿಸಿ ಹಾಡಿಕೊಂಡು ಕುಣಿದಿದ್ದಾನೆ.

*ತಾಯ ಗರ್ಭದಿಂದ ತಾಂ ಬರುವ ಸಮಯದಿ*
*ಮೊದಲು ವಸ್ತ್ರವಿಲ್ಲ ತುದಿಗುಮಿಲ್ಲ*
*ನಡುವೆ ಬಟ್ಟೆಯುಡುವುವುದೇಕೆಂದು ತಿಳಿಯಿರಿ*
*ವಿಶ್ವತೋಭಿರಾಮ ಕೇಳು ವೇಮಾ ॥*
*ಚಾರು ಚನುದೊಂಭ ಬಯಿಕೆತ್ತಿ ಚೇರಬಿಗಿಚಿ*
*ಕಂಚುಕಮು ಗಟ್ಟಿ ಕಾಮಿನೀ ಕಪಟ ವೇಷಧಾರಿ*
*ವಲಯೋನ ಬಡಿ ನೀವು ದಗುಲುಕೊನಕು*
*ವಿಮಲಗುಣ ರಾಜಯೋಗೀಂದ್ರ ವೇಮನಾರ್ಯ*

ಮುಂದೆ ಸೋಮಶೇಖರನೆಂಬ ಸದ್ಗುರುವಿನ ಸದುಪ ದೇಶದಿಂದ ನೀತಿ, ಧರ್ಮ, ಜ್ಞಾನರತ್ನಗಳನ್ನರಿತು ತನ್ನ ಜ್ಞಾನ ಮಾರ್ಗದ ಪದಗಳಿಂದ ಮಾನವರನ್ನು ಭವ್ಯಮಾನವರನ್ನಾಗಿ ಮಾಡಿ ವಿಖ್ಯಾತನಾಗುತ್ತಾನೆ. ಅವರ ಅಂಧಶ್ರದ್ಧೆ–ಮೂಢ ನಂಬಿಕೆಗಳನ್ನು ಅಳಿಸಿ ಹಾಕಿ ಅರಿವಿನ ಅಮೃತವನ್ನು ಉಣಿಸುತ್ತಾನೆ, ತಣಿಸುತ್ತಾನೆ. ತಾನೇ ಹೇಳಿಕೊಂಡಂತೆ 'ಶ್ರೀಕರ ಶಿವತತ್ತ್ವಶೀಲುಡಾ ವೇಮನಾ' ಆಗುತ್ತಾನೆ. ಮುಂದೆ ಈತ ಸಾವಿರಾರು ಅನುಭವದ ಪದ್ಯಗಳನ್ನು ಹೇಳುತ್ತ, ಆಂಧ್ರದ ತುಂಬೆಲ್ಲಾ ಸಂಚರಿಸತೊಡಗಿದನು. ವೇಮನನು ರಚಿಸಿದ ಎಲ್ಲ ಪದ್ಯಗಳಿಗೆ 'ವಿಶ್ವತೋಭಿರಾಮ ಕೇಳು ವೇಮಾ' ಎಂಬ ಮುದ್ರಿಕೆಯಿದೆ. ಮಾನವ ಲೋಕಕ್ಕೆ ಮಾರ್ಗದರ್ಶಕ ನಾದ ವೇಮನನ ಪದ್ಯಗಳು ಸಕಲವೇದಸಾರಗಳಾಗಿವೆ, ಅನುಭವಸಾರವಾಗಿವೆ. ಸುಲಲಿತವೂ, ಮನೋಹರವೂ ಆದ ಇವನ ಹಿತವಚನಗಳು ಲೋಕಾನುಭವವನ್ನು, ಶಿವಾನುಭವವನ್ನೂ ಸಮಾನ ಸಫಲತೆಯಿಂದ ಸೆರೆ ಹಿಡಿದಿವೆ! ಅಂತೆಯೇ ಈತನ ವಚನಗಳು ಮುಮುಕ್ಷುಗಳಿಗೂ ಮಾರ್ಗದರ್ಶಿಕೆಯಾಗಿವೆ. ಆತ ತನ್ನ ಆತ್ಮೋನ್ನತಿಗಾಗಿ ಮಾಡಿದ ಸಾಧನೆಯ ಫಲವಾಗಿ ಕೆಲವು ಸಿದ್ಧಿಗಳೂ ವಶವಾಗಿ ಪವಾಡಗಳನ್ನು ಮೆರೆದಿದ್ದಾನೆ. ಇವನಿಗೆ ಬಂಗಾರ ತಯಾರಿಸುವ ಕಲೆಯೂ ಸಿದ್ಧಿಸಿತ್ತಂತೆ. ಇಂತಹ ಒಬ್ಬ ಮಹಾಯೋಗಿಯನ್ನು ಕರುಣಿಸಿದ ಮಹಾಮಾತೆ ಮಲ್ಲಮ್ಮನಿಗೆ ಶತಕೋಟಿ ನಮನ ಸಲ್ಲಿಸಿದರೂ ಕಡಿಮೆಯೇ!

ಊರೂರು ಸಂಚರಿಸಿ ನೂರಾರು ಅನುಭವಗಳನ್ನು ಪಡೆದು ಸಹಸ್ರ, ಸಹಸ್ರಗಟ್ಟಲೆ ಪದ್ಯಗಳಲ್ಲಿ ಅವುಗಳನ್ನು ಬಿತ್ತರಿಸಿದ ವೇಮನನು ಕೊನೆಯಲ್ಲಿ ಶಾರ್ವರಿನಾಮ ಸಂವತ್ಸರ ಶ್ರೀರಾಮ ನವಮಿಯಂದು ಭೌತಿಕ ಪ್ರಪಂಚದಿಂದ ಮರೆಯಾದನು. ಇಂದಿಗೂ ಆಂಧ್ರ ರಾಜ್ಯದ ಕಡಪಾ ಜಿಲ್ಲೆಯ ಕದಿರು ತಾಲ್ಲೂಕಿನ 'ಕಠಾರುಪಲ್ಲಿ'ಯಲ್ಲಿರುವ ಅವನ ಸಮಾಧಿ ಜ್ಞಾನೋಪಾಸಕರಿಗೆ, ಆತ್ಮದರ್ಶನಾಕಾಂಕ್ಷಿಗಳಿಗೆ ಪವಿತ್ರ ಯಾತ್ರಾಸ್ಥಳವಾಗಿದೆ. ಅಲ್ಲಿ ಪ್ರತಿ ವರುಷ ಜಾತ್ರೆ ನಡೆದು, ಅಂದು ಭಕ್ತರನೇಕರು ಆತನ ವಚನಗಳನ್ನು ಹಾಡುತ್ತ ಸ್ಮರಿಸುವರು.

*ಅಂಗಮುಂದು ಲಿಂಗಮತಿಶಯಂಬುಗಗಟ್ಟಿ!*
*ಲಿಂಗಮಂದು ಭಕ್ತಿಲೇಕಯೆನ್ನ !*
*ದೊಂಗ ಗೊಡ್ಡು ಮೆಡವ ದುಂಗಗಟ್ಟಿನ ರೀತಿ!*
*ವಿಶ್ವಾದಾಭಿರಾಮ ವಿನುರ ವೇಮಾ!*

'ಅಂಗದ ಮೇಲೆ ಲಿಂಗ ಕಟ್ಟಿದ್ದರೂ ಲಿಂಗಭಕ್ತಿಯಿಲ್ಲದಿದ್ದರೆ ಕಳ್ಳ ದನದ ಕೊರಳಿಗೆ ಗುದ್ದಿಯನ್ನು ಕಟ್ಟಿದಂತೆ' ಎಂದು ಲಿಂಗಭಕ್ತಿ ವಿಹೀನರನ್ನು ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗುವವರನ್ನು ಖಂಡಿಸಿದ್ದಾನೆ. ಅಂಗ–ಲಿಂಗಗಳ ಅರಿವಿಲ್ಲದೆ ವೀರಶೈವನಾಗಬಾರದೆಂದೇ ಹೇಳಿದ್ದಾನೆ. ನಿಷ್ಠೆಯಿಲ್ಲದೆ ಇಷ್ಟಲಿಂಗ ಕೊರಳಿಗೆ ಬಿಗಿದರೆ ಫಲವಿಲ್ಲವೆಂದು ಮತ್ತೊಂದು ವಚನದಲ್ಲಿ ಸಾರಿದ್ದಾನೆ.

*ಲಿಂಗ ಜೀವುಲಂಚಿಸಿ ಭಂಗಪಟ್ಟಿ!*
*ಅಂಗಮುಂದುನು ಲಿಂಗಂಬು ನನುವು ಪರಚಿ!*
*ಸಂಗಮೇರ್ಪಡ ಜೂಚುಟೇ ಸತ್ಯಮಗುನು!*
*ವಿಶ್ವಾದಾಭಿರಾಮ ವಿನುರ ವೇಮ!!*

ಅಂದರೆ ಸ್ತ್ರೀ ಪುರುಷರೂಪವಾದ ಲಿಂಗಭೇದವನ್ನು ತೊಲಗಿಸಿ ಈರ್ವರ ಅಂಗದಲ್ಲಿ ಲಿಂಗಧಾರಣೆ ಮಾಡಿ ಲಿಂಗಾಂಗ ಸಾಮರಸ್ಯವನ್ನು ಅನುಭವಿಸುವುದೇ ಸತ್ಯ ಮಾರ್ಗವೆಂದಿದ್ದಾನೆ. ಅಂಗವೆಲ್ಲಿ ಹುಟ್ಟಿತು? ಲಿಂಗವೆಲ್ಲಿ ಹುಟ್ಟೀತು? ಎಂಜಲು ಹುಟ್ಟಿದುದು ಎಲ್ಲಿ? ಎಲ್ಲವೂ ಶಿವ ಸ್ವರೂಪವಾಗಿ ಏಕವಾದ ಮೇಲೆ ಎಂಜಲು, ಎಂಜಲು ಎಂದು ಎಗ್ಗು ಮಾಡುವುದೇಕೆ? ಇದು ವೇಮನನ ನಿಲುವು. ಆ ಎತ್ತರದಲ್ಲಿ ನಿಂತು ಎಲ್ಲವನ್ನೂ ನೋಡಿ ಅನುಭವಾಮೃತವನ್ನು ನೀಡಿ ಶಿವನೊಳಗೆ ಕೂಡಿ ಹೋದಾತ ವೇಮನ. ಅವನು ಬೋಧಿಸಿದುದು ಉದಾತ್ತವಾದ ಉದಾರವಾದ ಶಿವಾದ್ವೈತ ಸಿದ್ಧಾಂತ. ಆದುದರಿಂದ ಇಂದಿಗೂ ಗೋಪಾಲನಿಂದ ಭೂಪಾಲನವರೆಗೆ, ಬಡವನಿಂದ ಬಲ್ಲಿದನವರೆಗೆ ಅವನ ವಚನಗಳನ್ನೋದಿ ಆನಂದಿಸಲಾರದವರೇ ಇಲ್ಲ. ಆತ ಸರ್ವಜನಗ್ರಾಹಿಯಾದ ಮಹಾಯೋಗಿ! ಸಾಕ್ಷಾತ್ ಶಿವಯೋಗಿ!!

ವೇಮನ ವಿಶ್ವಕವಿ, ಜನಪದ ಕವಿ ಮತ್ತು ಯೋಗಿ. ಮತಪರವಾದ ಸಾಂಪ್ರದಾಯಿಕ ಆಚಾರಗಳನ್ನು, ನಂಬಿಕೆಗಳನ್ನು ಅನೇಕ ಕಡೆ ವೇಮನ ಖಂಡಿಸಿದ್ದಾನೆ. ಮೇಲೆ ಕೆಲವು ಪದ್ಯಗಳ ಮೂಲಕ ಹೇಳಲಾಗಿದೆ. ಇನ್ನುಳಿದ ಹೆಚ್ಚಿನ ಪದ್ಯಗಳಲ್ಲಿ ಆಧ್ಯಾತ್ಮ ವಿಷಯಗಳನ್ನು ತಾರ್ಕಿಕವಾಗಿ ಹೇಳು ವುದೇ ವೇಮನನ ಪದ್ಧತಿ. ಬ್ರಹ್ಮಜ್ಞಾನವನ್ನು ತಿಳಿಯುವುದು ಸಾಮಾನ್ಯ ವಿಷಯವಲ್ಲ. ಅದರ ಸ್ವರೂಪವನ್ನು ತಿಳಿಯಲು ಬ್ರಹ್ಮನಿಗೂ ಸಾಧ್ಯವಾಗುವುದಿಲ್ಲವೆಂದ ಮೇಲೆ ಇನ್ನು ಸಾಮಾನ್ಯರ ವಿಷಯವೇನು?

***ಆಕು ಚಾಟುನ ನುಂಡು ನನ್ನಿ ಲೋಕಂಬುಲು***
***ಕೊಮ್ಮಕಾಲರಾದು ಬ್ರಹ್ಮಕೈನ***
***ಕೊಮ್ಮಕಾನ ಬಡಿವ ಕೊ ನಿಯಾಡವಚ್ಚುರಾ***
***ವಿಶ್ವದಾಭಿರಾಮ ವಿನುರವೇಮ***

ತಾತ್ಪರ್ಯ: ವಿಶ್ವದಾತನಾದ ಈಶ್ವರನಿಗೆ ಪ್ರೀತಿಗೆ ಪಾತ್ರನಾದ ವೇಮನನೇ ಕೇಳು! ಎಲ್ಲ ಲೋಕಗಳೂ ಎಲೆಯ ಮರೆಯಲ್ಲೇ ಇರುತ್ತವೆ. ಕೊಂಬೆ ಮಾತ್ರ ಬ್ರಹ್ಮನಿಗೂ ಕಾಣುವುದಿಲ್ಲ. ಕೊಂಬೆಯನ್ನು ನೋಡಲು ಸಾಧ್ಯವಾದರೆ ಅಂಥ ಯೋಗಿಯನ್ನು ಕೊಂಡಾಡಬಹುದು. ಮತ್ತೊಂದು ವಚನದಲ್ಲಿ ಊರಿಗೆ ಹೋದಾಗ ಜನ ಸಂತೋಷ ಪಡುತ್ತಾರೆ. ಕಾಡಿಗೆ ಹೋದಾಗ ಕಷ್ಟ ಪಡುತ್ತಾರೆ. ಊರನ್ನು ಕಾಡನ್ನು ಒಂದೇ ದೃಷ್ಟಿಯಿಂದ ನೋಡುವವನೇ ಯೋಗಿ ಎನಿಸಿಕೊಳ್ಳುತ್ತಾನೆಂದಿದ್ದಾನೆ. ಕನ್ನಡದ ಸರ್ವಜ್ಞನು ಹೇಳಿರುವಂತೆ, 'ಚಿತ್ತವಿಲ್ಲದ ಗುಡಿಯ ತಾ ಸುತ್ತಿ ಫಲವಿಲ್ಲ' ಎಂಬುದನ್ನು ವೇಮನನೇ ಕೇಳು, ಎಷ್ಟೆಷ್ಟು ಪೂಜೆಗಳನ್ನು ಎಲ್ಲಿ ಮಾಡಿದರೂ ಫಲವೇನಿದೆ? ಎಂಬುದನ್ನು ವೇಮನ್ನನೇ ಕೇಳು. ಎಷ್ಟೆಷ್ಟು ಪೂಜೆಗಳನ್ನು ಎಲ್ಲಿ ಮಾಡಿದರೂ ಫಲವೇನಿದೆ? ಭಕ್ತಿಯಿಲ್ಲದೆ ಪೂಜೆ ಮಾಡಿದರೆ ಫಲವಿಲ್ಲ. ಭಕ್ತಿಯಿಂದ ಪೂಜೆ ಮಾಡಿದರೆ ಮುಕ್ತಿ ಸಿಗುತ್ತದೆ. ಭಕ್ತಿ ಎಂಬುದು ಸತ್ಯ ಪ್ರಾಮಾಣಿಕವಾಗಿರಬೇಕು. ಮನಸ್ಸಿಲ್ಲದ ಮನಸ್ಸಿನಿಂದ ತೋರಿಕೆಗಾಗಿ ಭಕ್ತಿ ಇದ್ದರೂ ಫಲವಿಲ್ಲ. ಈ ೧ಳ ವಿಷಯವನ್ನು ವೇಮನನು ಅನೇಕ ಪದ್ಯಗಳಲ್ಲಿ ಹೇಳಿದ್ದಾನೆ. ದುರ್ಜನರ ಬಗೆಗೆ ವೇಮನನು–'ಕಲ್ಲು ಬಂಡೆಗಳನ್ನು ಒಡೆಯಬಹುದು. ಬೆಟ್ಟಗಳನ್ನು ಚೂರು ಚೂರು ಮಾಡಬಹುದು. ಆದರೆ ಕಠಿಣ ಚಿತ್ತವುಳ್ಳ ಮನಸ್ಸನ್ನು ಕರಗಿಸಲು ಸಾಧ್ಯವಿಲ್ಲವೆನ್ನುತ್ತಾನೆ. (ಎಂತ ಚದುವು ಚರಿವಿ ಯೆನ್ನಿ ನೇರ್ಚನಗಾನಿ! ಹೀನುಡವ ಗುಣಂಬು ಮಾನಲೇಡು! ಬೊಗ್ಗು ಪಾಲಗಡುಗ ಪೋವುನಾ ಮಲಿನಂಬು! ವಿ.ವಿ. ವೇಮ) ಅಲ್ಪಬುದ್ಧಿಯವನಿಗೆ ಅಧಿಕಾರವನ್ನು ಕೊಟ್ಟರೆ ದೊಡ್ಡವರನ್ನೆಲ್ಲ ತೊಲಗಿಸುತ್ತಾನೆ. ಎಕ್ಕಡ ತಿನ್ನುವ ನಾಯಿಗೆ ಕಬ್ಬಿನ ಸಿಹಿ ತಿಳಿಯುತ್ತದೆಯೇ ಎಂದು ಹೇಳಿ ಎಷ್ಟೆಲ್ಲ ಓದಿ ಎಷ್ಟು ಕಲಿತರೂ ಹೀನ ಜನ ಅವಗುಣವನ್ನು ಬಿಡುವುದಿಲ್ಲ. ಇದ್ದಿಲನ್ನು ಹಾಲಿನಿಂದ ತೊಳೆದರೂ ಅದರ ಮಾಲಿನ್ಯ ಮಾತ್ರ ಹೋಗುವುದಿಲ್ಲವೆಂದು ವ್ಯಂಗ್ಯ ನುಡಿದಿದ್ದಾನೆ!.

ಸನ್ಮಾರ್ಗ: ಸನ್ಮಾರ್ಗದ ಹಾದಿಯಿರುವುದು ಮನುಷ್ಯನ ಶ್ರೇಯಸ್ಸಿಗಾಗಿ. ಅದನ್ನು ಬಿಟ್ಟು ಅಡ್ಡ ಹಾದಿ ಹಿಡಿಯುವ ಜನರನ್ನು ಕಂಡು ರೇಗಿದಂತಿದೆ ವೇಮನ. ಆತ ತನ್ನ ಹಲವು ವಚನಗಳಲ್ಲಿ ಈ ವಿಷಯದ ಕುರಿತು ಬಣ್ಣಿಸಿದ್ದಾನೆ. ಇಹಪರಗಳ ಚಿಂತೆ ಮಾಡುವ ಮನುಷ್ಯ ಜೀವನವನ್ನು ಹೇಗೆ ನಡೆಸಬೇಕೆನ್ನುವುದರ ಬಗೆಗೆ ವೇಮನ ಹಲವು ಪದ್ಯಗಳನ್ನು ಬರೆದಿರುವನು. ಇವೆನ್ನವೂ ಲೋಕಾನುಭವದಿಂದ ಮೂಡಿ ಬಂದಿರುವುದರಿಂದ ಆದರ್ಶದ ಜೀವನಕ್ಕೆ ಅಗತ್ಯ ಮಾರ್ಗವನ್ನು ನಮಗೆ ತೋರಿಸಿಕೊಡುತ್ತವೆ. ಒಂದು ಪ್ರಸಿದ್ಧ ಪದ್ಯ ಹೀಗಿದೆ–(ಅನಗ ನನಗ ರಾಗ ಮರ್ತಿಯಿಲ್ಲ

ಸಾಧ್ವಿಮಣಿ, ಶಿವಭಕ್ತೆ, ಪತಿಪಾದ ಸೇವಾಸಕ್ತೆ, ರೆಡ್ಡಿ ಕುಲಜಾತೆ, ಅತ್ತೆ–ನಾದಿನಿಯರ ಕಿರುಕುಳ ಹಿಂಸೆಗಳನ್ನು ಎದುರಿಸಿದ ಧೀರೆ! ಅವಳ ಚರಿತ್ರೆಯನ್ನು ಸುಮಾರು ೧೧೦ ಪುಟಗಳಲ್ಲಿ 'ಶರಣೆ ಹೇಮರೆಡ್ಡಿ ಮಲ್ಲಮ್ಮ' ಎಂಬ ಶೀರ್ಷಿಕೆಯಡಿಯಲ್ಲಿ ಬರೆದುದನ್ನು ನವೆಂಬರ್–ಡಿಸೆಂಬರ್ ದ್ವೈಮಾಸಿಕ (೨೦೦೯ರಲ್ಲಿ) ಪತ್ರಿಕೆ 'ಪ್ರಸಾದ'– ಜೆಎಸ್‌ಎಸ್ ಮಹಾ ವಿದ್ಯಾಪೀಠ, ಮೈಸೂರು ಅವರು ಪ್ರಕಟಿಸಿರುವುದನ್ನು ತಾವು ಗಮನಿಸಿರಬಹುದು. ಇಲ್ಲಿ ವೇಮನನನ್ನು ಯೋಗಿ–ಮಹಾಯೋಗಿ ಯನ್ನಾಗಿಸಿದ ಕೀರ್ತಿವಂತೆ ಮಲ್ಲಮ್ಮನೇ ಎಂಬ ಕಾರಣಕ್ಕೆ ವಿವರಿಸಲಾಯಿತು. ಅಕ್ಕನಾಗಲಾಂಬಿಕೆ ಬಸವಣ್ಣನವರನ್ನು ಪ್ರಮಥರನ್ನಾಗಿಸಿ ಜಗಜ್ಯೋತಿ ಯಾಗಿಸಿದಂತೆ ಮಲ್ಲಮ್ಮ ಮಹಾಮಾತೆ ವೇಮನ ಯೋಗಿಯನ್ನಾಗಿಸಿದ ಕೀರ್ತಿವಂತಳು!! ಆದರೆ ಅಚ್ಚರಿಯ ಸಂಗತಿಯೇನೆಂದರೆ ಜ್ಞಾನವೃದ್ಧಿಗೆ ಕಾರಣನಾದ ಅಭಿರಾಮನನ್ನು ಪ್ರತಿಯೊಂದು ಪದ್ಯದ ಕೊನೆಗೆ ಸ್ತುತಿಸಿದ ವೇಮನನು ತನ್ನ ಜೀವನದ ಮುಖ್ಯವಾದ ತಿರುವಿಗೆ, ಪರಿವರ್ತನೆಗೆ ಕಾರಣಳಾದ, ಗುರುವಿನ ಸ್ಥಾನದಲ್ಲಿರುವ ಅತ್ತಿಗೆ ಮಲ್ಲಮ್ಮನನ್ನು ಎಲ್ಲಿಯೂ ಅವನು ಜ್ಞಾಪಿಸದೇ ಇರುವುದು–ಸೋಜಿಗವಲ್ಲವೆ? ಇದರ ಕುರಿತು ಸಂಶೋಧನೆ ನಡೆಯಬೇಕಾಗಿದೆ.

**ಮಲ್ಲಮ್ಮನ ಕೊಡುಗೆಯೇ ಮಹಾಯೋಗಿ ವೇಮನ:**

ಈ ಮಾತು ನಿತ್ಯಸತ್ಯ! ಈ ಮನೆತನಕ್ಕೆ ಮಲ್ಲಮ್ಮನು ಬರದಿದ್ದರೆ ಮನೆತನಕ್ಕೆ ಕೀರ್ತಿ ಅಷ್ಟೇ ಅಲ್ಲ ವಿಷಯಲಂಪಟ ವೇಮನ ಮಹಾಯೋಗಿಯೇ ಆಗುತ್ತಿರಲಿಲ್ಲ. ಮಹಾಮಾತೆ ಮಲ್ಲಮ್ಮನಿಂದಾಗಿ ಇಡೀ ಸ್ತ್ರೀಕುಲವೇ ಗೌರವದಿಂದ ಬದುಕು ಸಾಗಿಸುವಂತಾಯಿತು. ಆಂಧ್ರದ ಸತಿ ಸಕ್ಕೂಬಾಯಿ ಇದ್ದಂತೆಯೇ ಈ ನಮ್ಮ ಮಲ್ಲಮ್ಮ! ಮಹಾಕವಿಯೂ, ಮಹಾ ಯೋಗಿಯೂ ಆಗಿ ಜನಪ್ರಿಯನಾದವ ವೇಮನನು ಮಲ್ಲಮ್ಮನ ಮೈದುನನು. ಇವನು ತೆಲುಗು ಭಾಷೆಯಲ್ಲಿ ಆಟವೆಲದಿ, ತೇಟಗೀತಗಳಲ್ಲಿ ಸುಮಾರು ೫೦೦೨ ಪದ್ಯಗಳನ್ನು ರಚಿಸಿರುವನು.

ಈತ ಮೌಖಿಕ ಸಂಪ್ರದಾಯದ ಕವಿ. ಅವನು ಒಂದೇ ಸ್ಥಳದಲ್ಲಿ ಕುಳಿತು ಪದ್ಯಗಳನ್ನು ಬರೆದವನಲ್ಲ. ದೇಶೀ ಛಂದಸ್ಸಿನ ಆಟಲವೇದಿ ಎಂಬ ಪದ್ಯಗಳನ್ನು ಹೇಳುತ್ತಿದ್ದರೆ ಬಹುಶಃ ಅವನ ಶಿಷ್ಯರು ಅವನ ಪದ್ಯಗಳನ್ನು ಬರೆಯುತ್ತಿದ್ದರು ಎಂಬ ಮಾಹಿತಿಯನ್ನು ಡಾ॥ ಆರ್ದ್ರಿಯಸ್.ಸುಂದರಂ ಹೇಳುತ್ತಾರೆ. ಆ ಪದ್ಯಗಳು ಸುಂದರ ಸರಳವೂ, ಸುಲಭವಾಗಿ ಯಾರಿಗಾದರೂ ಅರ್ಥವಾಗುವಂತಹವು. ಆದುದರಿಂದ ಅವನ ಶಿಷ್ಯರು ಯಾರಾದರೂ ಬರೆದಿಟ್ಟಿರಬಹುದು ಎಂಬುದು ಒಂದು ಅಭಿಪ್ರಾಯ! ತೆಲುಗು ಸಾಹಿತ್ಯ ಅತ್ಯಂತ ಶ್ರೀಮಂತವಾಗಲು ವೇಮನನ ಕೊಡುಗೆಯೂ ಕಾರಣವಾಗಿದೆ!

**ಆಟವೆಲದಿಯ ಕುರಿತು (ಆಟವೆಲದಿ):**

ಸಮಾಜಕ್ಕಾಗಿ ತಾನೇ ರೂಪಿಸಿದ ಮೌಲ್ಯಗಳನ್ನು ಪ್ರಚಾರ ಮಾಡಲು ವೇಮನ ಆಯ್ಕೆ ಮಾಡಿಕೊಂಡ ಪದ್ಯ 'ಆಟವೆಲದಿ'. ಇದೊಂದು ದೇಶೀ ಛಂದಸ್ಸಿನ ಪದ್ಯ, ಚೌಪದವಾಗಿದೆ. ತೆಲುಗಿನಲ್ಲಿ ಈ ಪದ್ಯವನ್ನು ಶಾಸನ ಕಾಲದಿಂದಲೂ ಕವಿಗಳು ಬಳಸುತ್ತಾ ಬಂದಿದ್ದಾರೆ. ಇದು ತೆಲುಗಿನ ಜನಪ್ರಿಯ ಛಂದಸ್ಸುಗಳಲ್ಲಿ ಒಂದು. ನಾಲ್ಕೂ ಪಾದಗಳಲ್ಲಿ ಮೂರನೆಯ ಗಣದ ಮೊದಲನೆಯ ಅಕ್ಷರ ವಡಿಪ್ರಾಸದ ಅಗತ್ಯವಿಲ್ಲ. ವಡಿ ತೆಲುಗಿನ ಎಲ್ಲಾ ಪದ್ಯಗಳಲ್ಲೂ ಇರಲೇಬೇಕಾದ ಲಕ್ಷಣ. ಕೊಂಡವೀಡು ಈತನ ಜನ್ಮಸ್ಥಳವಾದುದರಿಂದ ಗ್ರಾಮೀಣ ಸೊಗಡಿನ ಭಾಷೆಯಲ್ಲಿಯೇ ಈ ಪದಗಳನ್ನು ರಚಿಸಿರ ಬಹುದು. ಭಾಷೆಯ ದೃಷ್ಟಿಯಿಂದ ಗಮನಿಸಿದರೆ–ವೇಮನನು ಆಂಧ್ರಪ್ರದೇಶದ ರಾಯಲಸೀಮ ದವನೆಂಬುದು ಸ್ಪಷ್ಟವಾಗುತ್ತದೆ.

'ಆಟವೆಲದಿ' ಎಂದರೆ ವೇಶ್ಯ ಎಂದರ್ಥ. ಯೋಗಿಯಾದ ವೇಮನನು ಮೊದಲು ವೇಶ್ಯಾಲೋಲನಾಗಿದ್ದು ಆನಂತರ ಯೋಗಿಯಾದನೆಂದು ಐತಿಹ್ಯವಿದೆ. ಅತ್ತಿಗೆ ಮಲ್ಲಮ್ಮನಿಂದಲೇ ಮಹಾಯೋಗಿಯಾದ ಕಥೆ ರೋಚಕವಾದುದು. 'ಆಟವೆಲದಿ; ಪದ್ಯದ ನಾಲ್ಕು ಪಾದಗಳಲ್ಲಿ ನಾಲ್ಕನೆಯದು 'ವಿಶ್ವದಾಭಿರಾಮ ವಿನುರ ವೇಮ' ಎಂಬುದು 'ವಿಶ್ವದ' ಎಂದರೆ ವಿಶ್ವವನ್ನೇ ನೀಡಿದ ಭಗವಂತನೆ; 'ಅಭಿರಾಮ' ಎಂದರೆ ಪ್ರೀತಿಗೆ ಪಾತ್ರನಾದವನು. ಈತನ ಗುರುವಿನ ಹೆಸರೂ ಆಗಿರಬೇಕು. 'ವಿನುರ ವೇಮ' ಎಂದರೆ ಕೇಳು ಎಂದರ್ಥ. ಒಟ್ಟಿನಲ್ಲಿ ಈ ಅಂಕಿತ ಪಾದಕ್ಕೆ 'ಸರ್ವೇಶ್ವರನಿಗೆ ಪ್ರೀತಿಗೆ ಪಾತ್ರನಾದ ವೇಮನನೇ ಕೇಳು' ಎಂದರ್ಥ ಹೇಳಬಹುದು. ಇದು 'ಸರ್ವಜ್ಞ' ರೀತಿಯ ಆತ್ಮಸಂಬೋಧನೆ. ಲೋಕದ ಜನತೆಗೆ ನೀತಿ, ನಿಯಮ, ಪುರುಷಾರ್ಥ, ಸಂಗತಿಗಳನ್ನು ಹೇಳುವುದಕ್ಕಿಂತ





ತನಗೆ ತಾನೇ ಹೇಳಿಕೊಳ್ಳುವಂತಹ ಪ್ರವೃತ್ತಿಯನ್ನು ಸರ್ವಜ್ಞನಲ್ಲೂ–ವೇಮನನಲ್ಲೂ ಕಾಣುತ್ತೇವೆ. ವೇಮನನ ನಾಲ್ಕು ಪಾದಗಳ ಪದ್ಯಗಳಲ್ಲಿ ಒಂದು ಪಾದದ ಅಂಕಿತ ಪಾದವೇ ಆಗಿರುವುದರಿಂದ ಸರ್ವಜ್ಞನಂತೆಯೇ ವೇಮನನೂ ಮೂರೇ ಸಾಲುಗಳಲ್ಲಿ ಮೂರೂ ಲೋಕಗಳ ಸತ್ಯವನ್ನು ಅಡಕವಾಗಿ ಹೇಳಿದ್ದಾನೆಂಬುದು ತಿಳಿದು ಬರುತ್ತದೆ. ಆದರೂ ಛಂದೋ ರೂಪದ ದೃಷ್ಟಿಯಿಂದ ಚೌಪದ.

**ವೇಮನನ ವ್ಯಕ್ತಿತ್ವ :**

ಈತನ ವ್ಯಕ್ತಿತ್ವ ತಿಳಿದು ಬರುವುದು ಅವನ ಪದ್ಯಗಳಿಂದಲೇ ಮಾತ್ರ. ಈತ ಮೌಖಿಕ ಸಂಪ್ರದಾಯದ ಕವಿಯಾದುದರಿಂದ, ಜನಪದ ಸಾಹಿತ್ಯವೂ ಆಂಧ್ರದಲ್ಲಿ ಜನಪ್ರಿಯವಾಗಿತ್ತು. 'ನನ್ನಯ್ಯನ–ಮಹಾಭಾರತದಲ್ಲಿ ಜನಪದ ಪದ್ಯಗಳೂ ಬಳಕೆಯಾಗಿವೆ. ಈ ಕಾರಣದಿಂದ ವೇಮನನು ಸಾವಿರಾರು ಪದ್ಯಗಳನ್ನು 'ಆಟವೆಲದಿ'ಯಲ್ಲಿ ತನ್ನ ಪದ್ಯ ರಚನೆ ಮಾಡಿದ್ದುದನ್ನು ಈಗಾಗಲೇ ಚರ್ಚಿಸಲಾಗಿದೆ. ಆಂಧ್ರದ ಗಡಿಯನ್ನೂ ದಾಟಿ ಕರ್ನಾಟಕ ಮತ್ತು ತಮಿಳು ನಾಡುಗಳಲ್ಲೂ ಪರಿಚಿತನಾಗಿರುವ ಜನಪ್ರಿಯ ಕವಿ ವೇಮನ. ತಾತ್ವಿಕ ನೆಲೆಯಿಂದ ವಿಚಾರಿಸಿದಾಗ ಅತ್ಯಂತ ಮುಖ್ಯಕವಿಯಾಗಿರುವ ವೇಮನ ಸಾಮಾಜಿಕ ಕಳಕಳಿಯ ವಿಶಿಷ್ಟ ಕವಿಯಾಗಿಯೂ ಮುಖ್ಯನಾಗುತ್ತಾನೆ. ಈತ ತೆಲುಗಿನ ಶ್ರೇಷ್ಠ ಅನುಭಾವಿ ಸಂತ ಕವಿ!!.

ಈ ವೇಮನ ಒಬ್ಬ ಮಹಾಯೋಗಿ! ನಿಜವಾದ ಅರ್ಥದಲ್ಲಿ ಸನ್ಯಾಸಿ, ಕೊನೆಗೆ ಬಟ್ಟೆಯನ್ನೂ ಬಿಟ್ಟವನು. ಹುಟ್ಟಿದಾಗ ಬಟ್ಟೆ ಇರಲಿಲ್ಲ, ಸತ್ತಾಗ ಇರುವುದಿಲ್ಲ. ಮಧ್ಯದಲ್ಲಿ ಬಟ್ಟೆ ಏಕೆ? ಎಂದು ಪ್ರಶ್ನಿಸಿದವನು. ಮೂಲತಃ ವೇಮನನ ಹೆಸರು ವೇಮಾರೆಡ್ಡಿಯೆಂದೂ ರೆಡ್ಡಿರಾಜರ ವಂಶಕ್ಕೆ ಸೇರಿದವನೆಂದೂ ಈಗಾಗಲೇ ಪ್ರತಿಪಾದಿಸಲಾಗಿದೆ. ಈತ ಯಾವ ಕುಲವನ್ನು ಬೆಂಬಲಿಸದೆ, ಯಾವ ಮತವನ್ನು ಪ್ರಚಾರ ಮಾಡದೆ ಮನುಷ್ಯ ಜಾತಿಗೆ ಹೆಚ್ಚು ಗೌರವ ಕೊಟ್ಟವನು. ಆತ ಅದ್ವೈತಿಯೆಂಬುದಾಗಿ ಆತನ ಪದ್ಯಗಳಿಂದ ತಿಳಿದು ಬರುತ್ತದೆ. ಪದ್ಯಗಳ ಮೂಲಕ ಜನರ ಮನವನ್ನು ಗೆದ್ದಿರುವ ವೇಮನ ಯಾವುದೇ ಜಾತಿ, ಮತ, ಕುಲ, ಮೂಢಾಚಾರ, ಗೊಡ್ಡು ಸಂಪ್ರದಾಯ, ಕಪಟವರ್ತನೆ, ವೇಷಭೂಷಣಗಳು, ಪ್ರಾಂತ್ಯ, ಶಿಷ್ಟಭಾಷಾ ಸಾಹಿತ್ಯ ಸಂಪ್ರದಾಯಗಳು ಮುಂತಾದುವುಗಳಿಗೆ ಕಟ್ಟು ಬಿದ್ದವನಲ್ಲ. ಮನುಷ್ಯನಲ್ಲಿ ವೈಚಾರಿಕತೆ ಪ್ರಶ್ನಿಸುವ ಮನೋಭಾವ, ಮಾನವೀಯತೆ, ಸತ್ಸಂಗದಂತಹ ಗುಣ–ಗಣಗಳನ್ನು ಬೆಳೆಸಲು ಅವತರಿಸಿದ ಯೋಗಿ–ಮಹಾಯೋಗಿ ವೇಮನ! ತೆಲುಗು ಸಾಹಿತ್ಯ ಸಮೃದ್ಧವಾಗಲು ಈತನ ಕೊಡುಗೆ ಅಪಾರವಾದುದು ಎಂಬುದನ್ನು ಮರೆಯುವಂತಿಲ್ಲ. ತೆಲುಗು ಸಾಹಿತ್ಯಕ್ಕೆ ೩೦೦೦ ವರ್ಷಗಳ ಪ್ರಾಚೀನ ಇತಿಹಾಸವಿದೆಯೆಂಬುದು ಅಲ್ಲಿಯ ವಿದ್ವಾಂಸರ ಅಭಿಪ್ರಾಯವಾಗಿದೆ.

ಇವನ ಪದ್ಯಗಳು ಒಳಗೊಳ್ಳದ ವಿಷಯಗಳಿಲ್ಲ; ಜೀವನದ ಕ್ಷೇತ್ರಗಳಿಲ್ಲ. ಕನ್ನಡದ ಸರ್ವಜ್ಞನಂತೆಯೇ ವೇಮನನ ವಚನಗಳು ಆಂಧ್ರಪ್ರದೇಶದಲ್ಲಿ ಪ್ರಚಲಿತದಲ್ಲಿದ್ದು ಮನೆ ಮಾತಾಗಿವೆ. ಕರ್ನಾಟಕದಲ್ಲಿ ಇತ್ತೀಚೆಗೆ ಪ್ರತಿವರ್ಷ ಜನವರಿ ೧೯ರಂದು ಯೋಗಿ ವೇಮನನ ಜಯಂತ್ಯುತ್ಸವವನ್ನು ಆಚರಿಸುತ್ತ ಬಂದಿರುವುದು ಇಂಥ ಯೋಗಿ ವೇಮನನಿಗೆ ಅತ್ತಿಗೆಯಾಗಿ ಬಂದು ಯೋಗಿಯಾಗುವಂತೆ ಪರಿವರ್ತಿಸಿದ ಮಹಾಸಾಧ್ವಿ, ಹೇಮರೆಡ್ಡಿ ಮಲ್ಲಮ್ಮನ ಚರಿತ್ರೆ ರೋಚಕ ಎನ್ನುವುದಕ್ಕಿಂತ ಕರುಣಾರಸದ ಬೀಡಾಗಿದೆ. ಈ ಮಾತೆಯ ಬಗೆಗೆ ೧೨ ಗ್ರಂಥಗಳೂ, ನಾಟಕಗಳೂ, ಸಾಂಗತ್ಯದ ಕೃತಿಯೂ ಹೊರಬಂದಿವೆ. ಆ ಮಹಾಮಾತೆಯ ಬಗೆಗೆ ಅದೆಷ್ಟು ಬರೆದರೂ, ಓದಿದರೂ ತೀರದು! ಮಲ್ಲಮ್ಮ ಎಲ್ಲರ ಅಮ್ಮ! ರೆಡ್ಡಿಕುಲಜಾತೆಯಾದರೂ ಸ್ತ್ರೀಕುಲಕ್ಕೆ ಪೂಜ್ಯನೀಯ ಸ್ಥಾನದಲ್ಲಿದ್ದವಳು. ಅವಳೂ ಎಲ್ಲ ಹೆಣ್ಣು ಮಕ್ಕಳಂತೆಯೇ ಜನಿಸಿ ಬಾಳಿದವಳು. ಭರಮರೆಡ್ಡಿಯೊಂದಿಗೆ, ಆ ಮನೆಯ ಸರ್ವ ಸದಸ್ಯರೊಂದಿಗೆ ನಡೆದುಕೊಂಡ ಬಗೆ, ರೀತಿ, ಸ್ತ್ರೀಪರ ನಿಲುಮೆ, ಹೇಗೆ ಅನಾವರಣಗೊಂಡಿದೆ ಯೆಂಬುದನ್ನು ಇಂದಿನ ಸ್ತ್ರೀಯರು ಓದಲೇಬೇಕಾದ ಚರಿತ್ರಾ ಗ್ರಂಥವಿದು. ಬದುಕಿನ ದಂದುಗದಲ್ಲಿ ಬರುವ ಏರು–ಪೇರುಗಳನ್ನು ಎದುರಿಸಿದ ದಿಟ್ಟ–ಧೀಮಂತ ಮಹಿಳೆ ಮಲ್ಲಮ್ಮ! ಮೇಣಬತ್ತಿಯಂತೆ ತನ್ನನ್ನು ತಾನು ಸುಟ್ಟುಕೊಂಡು ಇತರರಿಗೆ ಬೆಳಕು ನೀಡಿದ ಮಹಾಮಾತೆ ಮಲ್ಲಮ್ಮ! ಆಕೆ ಕೇವಲ ರೆಡ್ಡಿಯ ಕುಲಜಾತೆಯಲ್ಲ ಎಲ್ಲರ ಜಾತೆ, ಮಹಾಮಾತೆ.

ಮಲ್ಲಮ್ಮ ಮೈದುನನ್ನು ಸೂಳೆಗೇರಿಯಿಂದ ಸತ್ಯದ ದಾರಿಗೆ ಎಳೆಯದಿದ್ದರೆ ಜಗತ್ತಿಗೆ ವೇಮನಯೋಗಿಯ

ಸಾಧ್ವಿಮಣಿ, ಶಿವಭಕ್ತೆ, ಪತಿಪಾದ ಸೇವಾಸಕ್ತೆ, ರೆಡ್ಡಿ ಕುಲಜಾತೆ, ಅತ್ತೆ–ನಾದಿನಿಯರ ಕಿರುಕುಳ ಹಿಂಸೆಗಳನ್ನು ಎದುರಿಸಿದ ಧೀರೆ! ಅವಳ ಚರಿತ್ರೆಯನ್ನು ಸುಮಾರು ೧೦ ಪುಟಗಳಲ್ಲಿ 'ಶರಣೆ ಹೇಮರೆಡ್ಡಿ ಮಲ್ಲಮ್ಮ' ಎಂಬ ಶೀರ್ಷಿಕೆಯಡಿಯಲ್ಲಿ ಬರೆದುದನ್ನು ನವೆಂಬರ್–ಡಿಸೆಂಬರ್ ದ್ವೈಮಾಸಿಕ (೨೦೦೯ರಲ್ಲಿ) ಪತ್ರಿಕೆ 'ಪ್ರಸಾದ'– ಜೆಎಸ್‌ಎಸ್ ಮಹಾ ವಿದ್ಯಾಪೀಠ, ಮೈಸೂರು ಅವರು ಪ್ರಕಟಿಸಿರುವುದನ್ನು ತಾವು ಗಮನಿಸಿರಬಹುದು. ಇಲ್ಲಿ ವೇಮನನನ್ನು ಯೋಗಿ–ಮಹಾಯೋಗಿ ಯನ್ನಾಗಿಸಿದ ಕೀರ್ತಿವಂತೆ ಮಲ್ಲಮ್ಮನೇ ಎಂಬ ಕಾರಣಕ್ಕೆ ವಿವರಿಸಲಾಯಿತು. ಅಕ್ಕನಾಗಲಾಂಬಿಕೆ ಬಸವಣ್ಣನವರನ್ನು ಪ್ರಮಥರನ್ನಾಗಿಸಿ ಜಗಜ್ಯೋತಿಯಾಗಿಸಿದಂತೆ ಮಲ್ಲಮ್ಮ ಮಹಾಮಾತೆ ವೇಮನ ಯೋಗಿಯನ್ನಾಗಿಸಿದ ಕೀರ್ತಿವಂತಳು!! ಆದರೆ ಅಚ್ಚರಿಯ ಸಂಗತಿಯೇನೆಂದರೆ ಜ್ಞಾನವೃದ್ಧಿಗೆ ಕಾರಣನಾದ ಅಭಿರಾಮನನ್ನು ಪ್ರತಿಯೊಂದು ಪದ್ಯದ ಕೊನೆಗೆ ಸ್ತುತಿಸಿದ ವೇಮನನು ತನ್ನ ಜೀವನದ ಮುಖ್ಯವಾದ ತಿರುವಿಗೆ, ಪರಿವರ್ತನೆಗೆ ಕಾರಣಳಾದ, ಗುರುವಿನ ಸ್ಥಾನದಲ್ಲಿರುವ ಅತ್ತಿಗೆ ಮಲ್ಲಮ್ಮನನ್ನು ಎಲ್ಲಿಯೂ ಅವನು ಜ್ಞಾಪಿಸದೇ ಇರುವುದು–ಸೋಜಿಗವಲ್ಲವೆ? ಇದರ ಕುರಿತು ಸಂಶೋಧನೆ ನಡೆಯಬೇಕಾಗಿದೆ.

**ಮಲ್ಲಮ್ಮನ ಕೊಡುಗೆಯೇ ಮಹಾಯೋಗಿ ವೇಮನ:**

ಈ ಮಾತು ನಿತ್ಯಸತ್ಯ! ಈ ಮನೆತನಕ್ಕೆ ಮಲ್ಲಮ್ಮನು ಬರದಿದ್ದರೆ ಮನೆತನಕ್ಕೆ ಕೀರ್ತಿ ಅಷ್ಟೇ ಅಲ್ಲ ವಿಷಯಲಂಪಟ ವೇಮನ ಮಹಾಯೋಗಿಯೇ ಆಗುತ್ತಿರಲಿಲ್ಲ. ಮಹಾಮಾತೆ ಮಲ್ಲಮ್ಮನಿಂದಾಗಿ ಇಡೀ ಸ್ತ್ರೀಕುಲವೇ ಗೌರವದಿಂದ ಬದುಕು ಸಾಗಿಸುವಂತಾಯಿತು. ಆಂಧ್ರದ ಸತಿ ಸಕ್ಕೂಬಾಯಿ ಇದ್ದಂತೆಯೇ ಈ ನಮ್ಮ ಮಲ್ಲಮ್ಮ! ಮಹಾಕವಿಯೂ, ಮಹಾ ಯೋಗಿಯೂ ಆಗಿ ಜನಪ್ರಿಯನಾದವ ವೇಮನನು ಮಲ್ಲಮ್ಮನ ಮೈದುನನು. ಇವನು ತೆಲುಗು ಭಾಷೆಯಲ್ಲಿ ಆಟವೆಲದಿ, ತೇಟಗೀತಗಳಲ್ಲಿ ಸುಮಾರು ೫೦೦೨ ಪದ್ಯಗಳನ್ನು ರಚಿಸಿರುವನು.

ಈತ ಮೌಖಿಕ ಸಂಪ್ರದಾಯದ ಕವಿ. ಅವನು ಒಂದೇ ಸ್ಥಳದಲ್ಲಿ ಕುಳಿತು ಪದ್ಯಗಳನ್ನು ಬರೆದವನಲ್ಲ. ದೇಶೀ ಛಂದಸ್ಸಿನ ಆಟಲವೇದಿ ಎಂಬ ಪದ್ಯಗಳನ್ನು ಹೇಳುತ್ತಿದ್ದರೆ ಬಹುಶಃ ಅವನ ಶಿಷ್ಯರು ಅವನ ಪದ್ಯಗಳನ್ನು ಬರೆಯುತ್ತಿದ್ದರು ಎಂಬ ಮಾಹಿತಿಯನ್ನು ಡಾ|| ಆರ್ವಿಯಸ್.ಸುಂದರಂ ಹೇಳುತ್ತಾರೆ. ಆ ಪದ್ಯಗಳು ಸುಂದರ ಸರಳವೂ, ಸುಲಭವಾಗಿ ಯಾರಿಗಾದರೂ ಅರ್ಥವಾಗುವಂತಹವು. ಆದುದರಿಂದ ಅವನ ಶಿಷ್ಯರು ಯಾರಾದರೂ ಬರೆದಿಟ್ಟಿರಬಹುದು ಎಂಬುದು ಒಂದು ಅಭಿಪ್ರಾಯ! ತೆಲುಗು ಸಾಹಿತ್ಯ ಅತ್ಯಂತ ಶ್ರೀಮಂತವಾಗಲು ವೇಮನನ ಕೊಡುಗೆಯೂ ಕಾರಣವಾಗಿದೆ!

**ಆಟವೆಲದಿಯ ಕುರಿತು (ಆಟವೆಲದಿ):**

ಸಮಾಜಕ್ಕಾಗಿ ತಾನೇ ರೂಪಿಸಿದ ಮೌಲ್ಯಗಳನ್ನು ಪ್ರಚಾರ ಮಾಡಲು ವೇಮನ ಆಯ್ಕೆ ಮಾಡಿಕೊಂಡ ಪದ್ಯ 'ಆಟವೆಲದಿ'. ಇದೊಂದು ದೇಶೀ ಛಂದಸ್ಸಿನ ಪದ್ಯ, ಚೌಪದವಾಗಿದೆ. ತೆಲುಗಿನಲ್ಲಿ ಈ ಪದ್ಯವನ್ನು ಶಾಸನ ಕಾಲದಿಂದಲೂ ಕವಿಗಳು ಬಳಸುತ್ತಾ ಬಂದಿದ್ದಾರೆ. ಇದು ತೆಲುಗಿನ ಜನಪ್ರಿಯ ಛಂದಸ್ಸುಗಳಲ್ಲಿ ಒಂದು. ನಾಲ್ಕೂ ಪಾದಗಳಲ್ಲಿ ಮೂರನೆಯ ಗಣದ ಮೊದಲನೆಯ ಅಕ್ಷರ ವಡಿಪ್ರಾಸದ ಅಗತ್ಯವಿಲ್ಲ. ವಡಿ ತೆಲುಗಿನ ಎಲ್ಲಾ ಪದ್ಯಗಳಲ್ಲೂ ಇರಲೇಬೇಕಾದ ಲಕ್ಷಣ. ಕೊಂಡವೀಡು ಈತನ ಜನ್ಮಸ್ಥಳವಾದುದರಿಂದ ಗ್ರಾಮೀಣ ಸೊಗಡಿನ ಭಾಷೆಯಲ್ಲಿಯೇ ಈ ಪದಗಳನ್ನು ರಚಿಸಿರ ಬಹುದು. ಭಾಷೆಯ ದೃಷ್ಟಿಯಿಂದ ಗಮನಿಸಿದರೆ–ವೇಮನನು ಆಂಧ್ರಪ್ರದೇಶದ ರಾಯಲಸೀಮದವನೆಂಬುದು ಸ್ಪಷ್ಟವಾಗುತ್ತದೆ.

'ಆಟವೆಲದಿ' ಎಂದರೆ ವೇಶ್ಯ ಎಂದರ್ಥ. ಯೋಗಿಯಾದ ವೇಮನನು ಮೊದಲು ವೇಶ್ಯಾಲೋಲನಾಗಿದ್ದು ಆನಂತರ ಯೋಗಿಯಾದನೆಂದು ಐತಿಹ್ಯವಿದೆ. ಅತ್ತಿಗೆ ಮಲ್ಲಮ್ಮನಿಂದಲೇ ಮಹಾಯೋಗಿಯಾದ ಕಥೆ ರೋಚಕವಾದುದು. 'ಆಟವೆಲದಿ; ಪದ್ಯದ ನಾಲ್ಕು ಪಾದಗಳಲ್ಲಿ ನಾಲ್ಕನೆಯದು 'ವಿಶ್ವದಾಭಿರಾಮ ವಿನುರ ವೇಮ' ಎಂಬುದು 'ವಿಶ್ವದ' ಎಂದರೆ ವಿಶ್ವವನ್ನೇ ನೀಡಿದ ಭಗವಂತನೆ; 'ಅಭಿರಾಮ' ಎಂದರೆ ಪ್ರೀತಿಗೆ ಪಾತ್ರನಾದವನು. ಈತನ ಗುರುವಿನ ಹೆಸರೂ ಆಗಿರಬೇಕು. 'ವಿನುರ ವೇಮ' ಎಂದರೆ ಕೇಳು ಎಂದರ್ಥ. ಒಟ್ಟಿನಲ್ಲಿ ಈ ಅಂಕಿತ ಪಾದಕ್ಕೆ 'ಸರ್ವೇಶ್ವರನಿಗೆ ಪ್ರೀತಿಗೆ ಪಾತ್ರನಾದ ವೇಮನನೇ ಕೇಳು' ಎಂದರ್ಥ ಹೇಳಬಹುದು. ಇದು 'ಸರ್ವಜ್ಞ' ರೀತಿಯ ಆತ್ಮಸಂಬೋಧನೆ. ಲೋಕದ ಜನತೆಗೆ ನೀತಿ, ನಿಯಮ, ಪುರುಷಾರ್ಥ, ಸಂಗತಿಗಳನ್ನು ಹೇಳುವುದಕ್ಕಿಂತ ತನಗೆ ತಾನೇ ಹೇಳಿಕೊಳ್ಳುವಂತಹ ಪ್ರವೃತ್ತಿಯನ್ನು ಸರ್ವಜ್ಞನಲ್ಲೂ–ವೇಮನನಲ್ಲೂ ಕಾಣುತ್ತೇವೆ. ವೇಮನನ ನಾಲ್ಕು ಪಾದಗಳ ಪದ್ಯಗಳಲ್ಲಿ ಒಂದು ಪಾದದ ಅಂಕಿತ ಪಾದವೇ ಆಗಿರುವುದರಿಂದ ಸರ್ವಜ್ಞನಂತೆಯೇ ವೇಮನನೂ ಮೂರೇ ಸಾಲುಗಳಲ್ಲಿ ಮೂರೂ ಲೋಕಗಳ ಸತ್ಯವನ್ನು ಅಡಕವಾಗಿ ಹೇಳಿದ್ದಾನೆಂಬುದು ತಿಳಿದು ಬರುತ್ತದೆ. ಆದರೂ ಛಂದೋ ರೂಪದ ದೃಷ್ಟಿಯಿಂದ ಚೌಪದ.

**ವೇಮನನ ವ್ಯಕ್ತಿತ್ವ :**

ಈತವ ವ್ಯಕ್ತಿತ್ವ ತಿಳಿದು ಬರುವುದು ಅವನ ಪದ್ಯಗಳಿಂದಲೇ ಮಾತ್ರ, ಈತ ಮೌಖಿಕ ಸಂಪ್ರದಾಯದ ಕವಿಯಾದುದರಿಂದ, ಜನಪದ ಸಾಹಿತ್ಯವೂ ಆಂಧ್ರದಲ್ಲಿ ಜನಪ್ರಿಯವಾಗಿತ್ತು. 'ನನ್ನಯ್ಯನ–ಮಹಾಭಾರತದಲ್ಲಿ ಜನಪದ ಪದ್ಯಗಳೂ ಬಳಕೆಯಾಗಿವೆ. ಈ ಕಾರಣದಿಂದ ವೇಮನನು ಸಾವಿರಾರು ಪದ್ಯಗಳನ್ನು 'ಆಟವೆಲದಿ'ಯಲ್ಲಿ ತನ್ನ ಪದ್ಯ ರಚನೆ ಮಾಡಿದ್ದುದನ್ನು ಈಗಾಗಲೇ ಚರ್ಚಿಸಲಾಗಿದೆ. ಆಂಧ್ರದ ಗಡಿಯನ್ನೂ ದಾಟಿ ಕರ್ನಾಟಕ ಮತ್ತು ತಮಿಳು ನಾಡುಗಳಲ್ಲೂ ಪರಿಚಿತನಾಗಿರುವ ಜನಪ್ರಿಯ ಕವಿ ವೇಮನ. ತಾತ್ವಿಕ ನೆಲೆಯಿಂದ ವಿಚಾರಿಸಿದಾಗ ಅತ್ಯಂತ ಮುಖ್ಯಕವಿಯಾಗಿರುವ ವೇಮನ ಸಾಮಾಜಿಕ ಕಳಕಳಿಯ ವಿಶಿಷ್ಟ ಕವಿಯಾಗಿಯೂ ಮುಖ್ಯನಾಗುತ್ತಾನೆ. ಈತ ತೆಲುಗಿನ ಶ್ರೇಷ್ಠ ಅನುಭಾವಿ ಸಂತ ಕವಿ!!.

ಈ ವೇಮನ ಒಬ್ಬ ಮಹಾಯೋಗಿ! ನಿಜವಾದ ಅರ್ಥದಲ್ಲಿ ಸನ್ಯಾಸಿ, ಕೊನೆಗೆ ಬಟ್ಟೆಯನ್ನೂ ಬಿಟ್ಟವನು. ಹುಟ್ಟಿದಾಗ ಬಟ್ಟೆ ಇರಲಿಲ್ಲ, ಸತ್ತಾಗ ಇರುವುದಿಲ್ಲ. ಮಧ್ಯದಲ್ಲಿ ಬಟ್ಟೆ ಏಕೆ? ಎಂದು ಪ್ರಶ್ನಿಸಿದವನು. ಮೂಲತಃ ವೇಮನನ ಹೆಸರು ವೇಮಾರೆಡ್ಡಿಯೆಂದೂ ರೆಡ್ಡಿರಾಜರ ವಂಶಕ್ಕೆ ಸೇರಿದವನೆಂದೂ ಈಗಾಗಲೇ ಪ್ರತಿಪಾದಿಸಲಾಗಿದೆ. ಈತ ಯಾವ ಕುಲವನ್ನು ಬೆಂಬಲಿಸದೆ, ಯಾವ ಮತವನ್ನು ಪ್ರಚಾರ ಮಾಡದೆ ಮನುಷ್ಯ ಜಾತಿಗೆ ಹೆಚ್ಚು ಗೌರವ ಕೊಟ್ಟವನು. ಆತ ಅದ್ವೈತ್ತಿಯೆಂಬುದಾಗಿ ಆತನ ಪದ್ಯಗಳಿಂದ ತಿಳಿದು ಬರುತ್ತದೆ. ಪದ್ಯಗಳ ಮೂಲಕ ಜನರ ಮನವನ್ನು ಗೆದ್ದಿರುವ ವೇಮನ ಯಾವುದೇ ಜಾತಿ, ಮತ, ಕುಲ, ಮೂಢಾಚಾರ, ಗೊಡ್ಡು ಸಂಪ್ರದಾಯ, ಕಪಟವರ್ತನೆ, ವೇಷಭೂಷಣಗಳು, ಪ್ರಾಂತ್ಯ, ಶಿಷ್ಟಭಾಷಾ ಸಾಹಿತ್ಯ ಸಂಪ್ರದಾಯಗಳು ಮುಂತಾದುವುಗಳಿಗೆ ಕಟ್ಟು ಬಿದ್ದವನಲ್ಲ. ಮನುಷ್ಯನಲ್ಲಿ ವೈಚಾರಿಕತೆ ಪ್ರಶ್ನಿಸುವ ಮನೋಭಾವ, ಮಾನವೀಯತೆ, ಸತ್ಸಂಗದಂತಹ ಗುಣ–ಗಣಗಳನ್ನು ಬೆಳೆಸಲು ಅವತರಿಸಿದ ಯೋಗಿ–ಮಹಾಯೋಗಿ ವೇಮನ! ತೆಲುಗು ಸಾಹಿತ್ಯ ಸಮೃದ್ಧವಾಗಲು ಈತನ ಕೊಡುಗೆ ಅಪಾರವಾದುದು ಎಂಬುದನ್ನು ಮರೆಯುವಂತಿಲ್ಲ. ತೆಲುಗು ಸಾಹಿತ್ಯಕ್ಕೆ ೩೦೦೦ ವರ್ಷಗಳ ಪ್ರಾಚೀನ ಇತಿಹಾಸವಿದೆಯೆಂಬುದು ಅಲ್ಲಿಯ ವಿದ್ವಾಂಸರ ಅಭಿಪ್ರಾಯವಾಗಿದೆ.

ಇವನ ಪದ್ಯಗಳು ಒಳಗೊಳ್ಳದ ವಿಷಯಗಳಿಲ್ಲ; ಜೀವನದ ಕ್ಷೇತ್ರಗಳಿಲ್ಲ. ಕನ್ನಡದ ಸರ್ವಜ್ಞನಂತೆಯೇ ವೇಮನನ ವಚನಗಳು ಆಂಧ್ರಪ್ರದೇಶದಲ್ಲಿ ಪ್ರಚಲಿತದಲ್ಲಿದ್ದು ಮನೆ ಮಾತಾಗಿವೆ. ಕರ್ನಾಟಕದಲ್ಲಿ ಇತ್ತೀಚೆಗೆ ಪ್ರತಿವರ್ಷ ಜನವರಿ ೧೯ರಂದು ಯೋಗಿ ವೇಮನನ ಜಯಂತ್ಯುತ್ಸವವನ್ನು ಆಚರಿಸುತ್ತ ಬಂದಿರುವುದು ಇಂಥ ಯೋಗಿ ವೇಮನನಿಗೆ ಅತ್ತಿಗೆಯಾಗಿ ಬಂದು ಯೋಗಿಯಾಗುವಂತೆ ಪರಿವರ್ತಿಸಿದ ಮಹಾಸಾಧ್ವಿ, ಹೇಮರೆಡ್ಡಿ ಮಲ್ಲಮ್ಮನ ಚರಿತ್ರೆ ರೋಚಕ ಎನ್ನುವುದಕ್ಕಿಂತ ಕರುಣರಸದ ಬೀಡಾಗಿದೆ. ಈ ಮಾತೆಯ ಬಗೆಗೆ ೧೨ ಗ್ರಂಥಗಳೂ, ನಾಟಕಗಳೂ, ಸಾಂಗತ್ಯದ ಕೃತಿಯೂ ಹೊರಬಂದಿವೆ. ಆ ಮಹಾಮಾತೆಯ ಬಗೆಗೆ ಅದೆಷ್ಟು ಬರೆದರೂ, ಓದಿದರೂ ತೀರದು! ಮಲ್ಲಮ್ಮ ಎಲ್ಲರ ಅಮ್ಮ! ರೆಡ್ಡಿಕುಲಜಾತೆಯಾದರೂ ಸ್ತ್ರೀಕುಲಕ್ಕೆ ಪೂಜ್ಯನೀಯ ಸ್ಥಾನದಲ್ಲಿದ್ದವಳು. ಅವಳೂ ಎಲ್ಲ ಹೆಣ್ಣು ಮಕ್ಕಳಂತೆಯೇ ಜನಿಸಿ ಬಾಳಿದವಳು. ಭರಮರೆಡ್ಡಿಯೊಂದಿಗೆ, ಆ ಮನೆಯ ಸರ್ವ ಸದಸ್ಯರೊಂದಿಗೆ ನಡೆದುಕೊಂಡ ಬಗೆ, ರೀತಿ, ಸ್ತ್ರೀಪರ ನಿಲುಮೆ, ಹೇಗೆ ಅನಾವರಣಗೊಂಡಿದೆ ಯೆಂಬುದನ್ನು ಇಂದಿನ ಸ್ತ್ರೀಯರು ಓದಲೇಬೇಕಾದ ಚರಿತ್ರಾ ಗ್ರಂಥವಿದು. ಬದುಕಿನ ದಂದುಗದಲ್ಲಿ ಬರುವ ಏರು–ಪೇರುಗಳನ್ನು ಎದುರಿಸಿದ ದಿಟ್ಟ–ಧೀಮಂತ ಮಹಿಳೆ ಮಲ್ಲಮ್ಮ! ಮೇಣಬತ್ತಿಯಂತೆ ತನ್ನನ್ನು ತಾನು ಸುಟ್ಟುಕೊಂಡು ಇತರರಿಗೆ ಬೆಳಕು ನೀಡಿದ ಮಹಾಮಾತೆ ಮಲ್ಲಮ್ಮ! ಆಕೆ ಕೇವಲ ರೆಡ್ಡಿಯ ಕುಲಜಾತೆಯಲ್ಲ ಎಲ್ಲರ ಜಾತೆ, ಮಹಾಮಾತೆ.

ಮಲ್ಲಮ್ಮ ಮೈದುನನ್ನು ಸೂಳೆಗೇರಿಯಿಂದ ಸತ್ಯದ ದಾರಿಗೆ ಎಳೆಯದಿದ್ದರೆ ಜಗತ್ತಿಗೆ ವೇಮನಯೋಗಿಯ



# ವಿಶ್ವದ ಅನುಭಾವಿಗಳ ಸಂತರಲ್ಲಿ ಕಂಗೊಳಿಸುವ ರತ್ನತ್ರಯರು
## -ವೇಮನ

-ಡಾ|| ಆರ್.ಬಿ. ಚಿಲುಮಿ *

**ತೆಲುಗಿನ ವೇಮನ :**

ವೇಮನ ಎಂದಾಕ್ಷಣವೇ 'ಹೇಮರೆಡ್ಡಿ ಮಲ್ಲಮ್ಮ' ಶಿವಶರಣೆ, 'ಸಾಧ್ವಿಮಣಿಯೇ ನೆನಪಾಗುತ್ತಾಳೆ. ಏಕೆಂದರೆ ಹುಚ್ಚನಂತೆ, ಪೆದ್ದನಂತೆ, ಮುಗ್ಧ ಭಾವದ ವೇಮನನನ್ನು, ಯೋಗಿಯನ್ನಾಗಿ ಪರಿವರ್ತಿಸಿದವಳೇ ಈ ಮಹಾಮಾತೆ. ಈತನ ಪಾಲಿಗೆ ಅಧಿದೇವತೆಯೇ ಆಗಿದ್ದಾಳೆ. ಅತ್ತಿಗೆಯನ್ನು ತಾಯಿಯ ಸ್ವರೂಪದಲ್ಲಿ ಕಂಡ ಸುಜ್ಞಾನಿ ವೇಮನ! ಅತ್ಯಂತ ಭೋಗಿಯಾಗಿದ್ದ ಮೈದುನ ವೇಮನನನ್ನು ಮಹಾಯೋಗಿಯನ್ನಾಗಿ ಮಾಡಿದ ಪುಣ್ಯವಂತೆ! ಈತನ ಪೂರ್ವಜರು ಆಂಧ್ರಮೂಲದವರು. ತೆಲುಗಿನಲ್ಲಿ 'ವೇಮ' ವಿದ್ದುದು ಕನ್ನಡದಲ್ಲಿದು 'ಹೇಮ'ವಾಗಿದೆ.

**ದೇಶ ಕಾಲಗಳ ವಿಚಾರ:**

ಈತನ ದೇಶ ಆಂಧ್ರಪ್ರದೇಶ. ಈತ ಅರಸು ಮನೆತನಕ್ಕೆ ಸೇರಿದವ. ಆದರೆ ಕಾಲದ ಬಗೆಗೆ ಊಹಾಪೋಹಗಳಿವೆ. ಸರ್ವಜ್ಞ ಮತ್ತು ವೇಮನರು ಸಮಕಾಲೀನರೆಂಬುದಾಗಿ ಹೆಚ್ಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಇಂದಿಗೆ ೫೦೦ ರಿಂದ ೫೫೦ ವರ್ಷಗಳ ಹಿಂದೆ ವೇಮನನ ಕಾಲವನ್ನು ಗುರುತಿಸಿದ್ದಾರೆ. 'ವೇಮ' ರೆಡ್ಡಿ ವಂಶದ ಮೂಲಪುರುಷ. ಇವನ ವಂಶಜರೆಲ್ಲ 'ವೇಮ' ಹಾಗೂ ತಮ್ಮ ಕುಲಸೂಚಕವಾದ 'ರೆಡ್ಡಿ' ಪದವನ್ನು ತಮ್ಮ ಹೆಸರಿನ ಮುಂದೆ ಸೇರಿಸಿಕೊಂಡರು. ಕುಮಾರಗಿರಿರೆಡ್ಡಿಯು ಮಲ್ಲಮ್ಮನ ಮಾವ. ಈತ ಕುಮಾರಗಿರಿರೆಡ್ಡಿ>ಹೇಮರೆಡ್ಡಿ> ಚೆನ್ನರೆಡ್ಡಿ ಎಂಬುದಾಗಿಯೂ ಕರೆಯಿಸಿಕೊಂಡವನು. ಈತನ ಪತ್ನಿಯು ಪದ್ಮಾವತಿಯು ಇವರ ಪೂರ್ವಜರು ಕ್ರಿ.ಶ. ೧೩೨೫ರಲ್ಲಿ ವೇಮನರೆಡ್ಡಿಯು ಶ್ರೀಶೈಲ ಸಮೀಪದ 'ಕೊಂಡವೀಡಿ'ನಲ್ಲಿ ರಾಜ್ಯವನ್ನು ಸ್ಥಾಪಿಸಿದನೆಂದೂ, ಡಾ|| ಸಣ್ಣೆಲ್ಲಪ್ಪನವರ ಅವರು ಹೇಮರೆಡ್ಡಿ ಮಲ್ಲಮ್ಮನ ಕೃತಿಯ ೩ನೆಯ ಪುಟದಲ್ಲಿ ಉಲ್ಲೇಖಿಸಿದ್ದಾರೆ. ಈತನ ತರುವಾಯ ಪೋಲಯ ವೇಮರೆಡ್ಡಿ, ದೇಸಟಿವೇಮಾರೆಡ್ಡಿ, ಅನಪೋತರೆಡ್ಡಿ, ಅನವೇಮರೆಡ್ಡಿ ವೇಮಾರೆಡ್ಡಿ ಅಥವಾ ಕುಮಾರಗಿರಿರೆಡ್ಡಿ, ಪೆದಕೋಮಟಿ, ವೇಮಭೂಪಾಲ, ರಾಚವೇಮಾರೆಡ್ಡಿ- ಇವರೆಲ್ಲರೂ ಕ್ರಮವಾಗಿ ೧೭, ೩೦, ೧೫, ೨೦, ೪ ವರ್ಷಗಳವರೆಗೆ ರಾಜ್ಯಾಡಳಿತವನ್ನು ಮಾಡಿದ್ದು ಒಟ್ಟು ೧೦೦ ವರ್ಷಗಳಷ್ಟು ಎಂಬುದು ಅಂದಾಜಿದೆ. ಒಟ್ಟಿನಲ್ಲಿ ಕಾಕತೀಯ ಆಳ್ವಿಕೆಯು ಅಸ್ತಂಗತವಾದ ತಕ್ಷಣವೇ ವೇಮಾರೆಡ್ಡಿಯು ಸ್ವತಂತ್ರವಾಗಿ ಈ 'ವಿನುಕೊಂಡ' ರಾಜ್ಯವನ್ನು ಆಕ್ರಮಿಸಿಕೊಂಡು ಸುಮಾರು ೧೫ ವರ್ಷಗಳ ತನಕ ರಾಜ್ಯಭಾರ ಮಾಡಿದನೆಂದು ಡಾ|| ಸಿದ್ಧಯ್ಯ ಪುರಾಣಿಕರು ತಮ್ಮ ಶರಣ ಚರಿತಾಮೃತ ಪುಟ-೫೪೮ರಲ್ಲಿ ವಿವರ ಒದಗಿಸಿದ್ದಾರೆ. ಪೆದಕೋಟಿ ವೇಮಭೂಪಾಲನ ತರುವಾಯ ಕುಮಾರಗಿರಿರೆಡ್ಡಿಯು ತನ್ನ ಮಕ್ಕಳೊಂದಿಗೆ 'ಸಿದ್ಧಾಪುರಕ್ಕೆ' ಹೋಗಿ ನೆಲೆಸುತ್ತಾನೆ. ಈತನಿಗೆ ಕೋಮಟಿ ವೆಂಕರೆಡ್ಡಿ, ನಾಗೇಂದ್ರ ರೆಡ್ಡಿ, ಭರಮರೆಡ್ಡಿ, ವೇಮರೆಡ್ಡಿ (ವೇಮನ) ಮುಂತಾದ ಐವರು ಮಕ್ಕಳಿದ್ದರೆಂದು ತಿಳಿದು ಬರುತ್ತದೆ. ಇವರಲ್ಲಿ ಮೂರನೆಯವನಾದ 'ಭರಮರೆಡ್ಡಿ'ಯು ಮುಗ್ಧ ಮತ್ತು ಪೆದ್ದ ಸ್ವಭಾವದವನಾಗಿದ್ದನು. ಈತನಲ್ಲಿ ಲೌಕಿಕ ವ್ಯವಹಾರ ಜ್ಞಾನವಿರಲಿಲ್ಲವೆಂದು ತೋರುತ್ತದೆ. ಮುಗ್ಧ ಸಂಗಯ್ಯನು ಮೋಸ, ವಂಚನೆ ಏರು-ಪೇರು ಗಳನ್ನು ಅರಿಯದವನು. ಇಂಥ ಮುಗ್ಧ ಭರಮರೆಡ್ಡಿಯೇ ಹೇಮರೆಡ್ಡಿ ಮಲ್ಲಮ್ಮನ ಪತಿಯಾಗುತ್ತಾನೆ. ವೆಲ್ಲಟೂರು ಪ್ರಾಂತಕ್ಕೆ ಸೇರಿದ್ದ 'ರಾಮಾಪುರ' ಗ್ರಾಮನಿವಾಸಿಗಳಾಗಿದ್ದ ವೇಮನ ನಾಗರೆಡ್ಡಿ ಸತಿ ಗೌರಮ್ಮ ದಂಪತಿಗಳ ಸುಪುತ್ರಿ ರತ್ನವೇ ಹೇಮರೆಡ್ಡಿ ಮಲ್ಲಮ್ಮ! ಈಕೆಯೇ ರೆಡ್ಡಿಕುಲದೀಪ್ತಿಯಾಗಿ ಕಂಗೊಳಿಸಿದ ಮಹಾಮಾತೆ! ಜಗನ್ಮಾತೆ! ಇವರ ಕುಲದೇವರೆ. ಶ್ರೀಶೈಲದ ಚೆನ್ನಮಲ್ಲಿಕಾರ್ಜುನದೇವ ಮತ್ತು ತಿರುಪತಿಯ ವೆಂಕಟೇಶ್ವರನಾಗಿರುವುದು ಕಂಡು ಬಂದಿದೆ. ಐದೂ ಮಂದಿ ಅಣ್ಣತಮ್ಮಂದಿರರೂ, ಅವರ ಹೆಂಡಂದಿರರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದ ಆ ಅವಿಭಕ್ತ ಕುಟುಂಬದಲ್ಲಿ ಮಲ್ಲಮ್ಮನ ಸತ್ವ ಪರೀಕ್ಷೆ ನಡೆಯುತ್ತದೆ. ಈಕೆ ಸಜ್ಜನೆ,

* ವಿಶ್ರಾಂತ ಪ್ರಾಧ್ಯಾಪಕರು, 'ಹೊಂಬೆಳಕು', ಮನೆ ನಂ. ೧೧೨-೧೧೩ ಓಂ ಹೈಸ್ಕೂಲ್ ಹತ್ತಿರ, ಧಾರವಾಡ-೫೮೦ ೦೦೩.







# ಮಹರ್ಷಿ ವಾಲ್ಮೀಕಿ

-ಕವಿತಾಕೃಷ್ಣ *

ತಮಸಾ ನದಿಯು ಪ್ರಶಾಂತವಾಗಿ ಹರಿಯುತ್ತಿದೆ. ಮರಗಿಡ ಬಳ್ಳಿಗಳು ಹಸುರುಗಟ್ಟಿ ಕಣ್ಣುಗಳಿಗೆ ಸೊಗಯಿಸುತ್ತಿವೆ. ಹಕ್ಕಿ ಪಕ್ಷಿಗಳು ಗರಿ ಬಿಚ್ಚಿ ಪ್ರಕೃತಿಯ ಮಡಿಲಲ್ಲಿ ಹಾರಾಡುತ್ತಿವೆ. ಕಾಡುಮೃಗಗಳು ನಿರ್ಭೀತಿಯಿಂದ ಓಡಾಡುತ್ತಿವೆ. ಅರಳಿದ ಹೂಗಳು ಸುಗಂಧ ಸೂಸುತ್ತಾ ಚೆಲುವು ಬಡಿಯುತ್ತಿವೆ. ಹಲವಾರು ಪರ್ಣಕುಟೀರಗಳು ತಾಪಸಿಗಳಿಗೆ ನೆಲೆಯಾಗಿ ನಿಂತಿವೆ. ಅಲ್ಲಿ ಸದ್ದುಗದ್ದಲವಿಲ್ಲ, ತಂಟೆ ತಾಪತ್ರಯಗಳಿಲ್ಲ. ತಮಸಾ ನದಿಯ ದಂಡೆಯಲ್ಲೇ ವಾಲ್ಮೀಕಿ ಮುನಿಗಳ ಆಶ್ರಮವಿದೆ. ಆ ಮಹರ್ಷಿಗಳ ತಪಸ್ಸಿನ ಪ್ರಭಾವದಿಂದಾಗಿ ವನವೆಲ್ಲಾ ಪ್ರಶಾಂತವಾಗಿದೆ. ಸುಖ-ಶಾಂತಿಯ ನೆಲೆಯಾಗಿದೆ. ಜ್ಞಾನಾರಾಧನೆಯ ಕೇಂದ್ರವಾಗಿದೆ. ಭಕ್ತಿಯ ಭಂಡಾರವಾಗಿದೆ. ಮುಕ್ತಿಯ ಮಂದಿರವಾಗಿದೆ.



ವಾಲ್ಮೀಕಿಗಳು ಜಗದ ಮೊದಲ ಮಹಾಕವಿಗಳು. ಶ್ರೀಮದ್ರಾಮಾಯಣವೆಂಬ ಮಹಾಕಾವ್ಯವನ್ನು ಬರೆದರು. ರಾಮನಾಮ ಬೀಜವನ್ನು ಸುಜನರ ಎದೆಯ ಹೊಲದಲ್ಲಿ ಬಿತ್ತಿದರು. ಕಾವ್ಯಕೃಷಿಯನ್ನು ಮಾಡಿದರು. ಮೊದಲು ಭಾರತೀಯರ ಬದುಕನ್ನು ಬಂಗಾರ ಮಾಡಿದರು. ಹೊಸ ಸಂಸ್ಕೃತಿ ಆರಂಭಿಸಿದರು. ಜ್ಞಾನದ ಬೆಳಕು ಚೆಲ್ಲಿದರು. ಭಕ್ತಿಯ ಹೆದ್ದಾರಿಯಲ್ಲಿ ನಡೆಸಿದರು. ಮುಕ್ತಿಯ ಸಾಮ್ರಾಜ್ಯಕ್ಕೆ ಕೊಂಡೊಯ್ದರು. ಮಾನವರ ಎದೆಯ ಗೂಡನ್ನು ದೇವರ ಬೀಡಾಗಿಸಿದರು. ಜನ್ಮವಿತ್ತ ಜನನಿ, ಬದುಕಿಗೆ ನೆಲೆಯಿತ್ತ ಜನ್ಮಭೂಮಿ ಸ್ವರ್ಗಕ್ಕಿನ್ನ ಮಿಗಿಲೆಂಬ ದಿವ್ಯಸಂದೇಶವನ್ನು ಇತ್ತರು. ಪುರುಷನಾದ ಶ್ರೀರಾಮನು ಪುರುಷೋತ್ತಮನಾದಂತೆ, ಪಕ್ಷಿ, ಪ್ರಾಣಿ, ಮಾನವ, ದಾನವ, ಕಪಿ, ಕರಡಿ, ಹೆಣ್ಣು, ಗಂಡು, ಮಡಿ, ಮೈಲಿಗೆಗಳೂ ಉನ್ನತಸ್ತರವೇರಲು ಸಾಧ್ಯವೆಂದು ತೋರಿದರು. ಅವರ ದಿವ್ಯವಾಣಿಯಿಂದ ನರ ಸುರನಾದ, ವರವಾದ, ಗುರುವಾದ ಕಡೆಗೆ ಸಾಕ್ಷಾತ್ ಹರನಾದ. ಅಷ್ಟೇಕೆ ವಾಲ್ಮೀಕಿ ಮಹಾಮುನಿಗಳ ಬದುಕೇ ಒಂದು ಭವ್ಯವಾದ ಭಗವದ್ಗೀತೆ ಆಯಿತು.

ವಾಲ್ಮೀಕಿ ಮಹರ್ಷಿಗಳು ಪೂರ್ವಾಶ್ರಮದಲ್ಲಿ ರೂಕ್ಷ ರೂಪದ ಬೇಡನಾಗಿದ್ದರು. ಅವರಿಗೂ ಸಂಸಾರವಿತ್ತು. ಎಲ್ಲರ ಒಡಲು ತುಂಬುವ ಹೊಣೆ ಅವರದಾಗಿತ್ತು. ಅದಕ್ಕಾಗಿ ನಿಷಾದರ ವೃತ್ತಿಯಂತೆ ಬೇಟೆಯಾಡಿ ಬದುಕುತ್ತಿದ್ದರು. ಬೇಟೆಗೆ ಪ್ರಾಣಿಗಳು ಸಿಕ್ಕರೆ ಸರಿ. ಇಲ್ಲವಾದರೆ ಸಿಕ್ಕ ಜನರನ್ನೇ ಬೇಟೆಯಾಡಲು ಮುಂದಾಗುತ್ತಿದ್ದರು. ಅವರಿಂದ ನಗ, ನಾಣ್ಯ, ವಸ್ತುಗಳನ್ನು ಅಪಹರಿಸುತ್ತಿದ್ದರು. ಒಟ್ಟಾರೆ ಹಿಂಸಾ ಮಾರ್ಗದಿಂದ ಹಣ ಸಂಪಾದಿಸಿ ಹೊಟ್ಟೆ ಹೊರೆಯುತ್ತಿದ್ದರು ಒಮ್ಮೆ ಇವರಿಗೆ ನಾರದ ಮಹರ್ಷಿಗಳು ಎದುರು ತಾಕಿದರು. ಕೂಡಲೆ ವ್ಯಾಧನಾಗಿದ್ದ ಅವರು ಎದುರಾಳಿಯ ಮೇಲೆ ದಾಳಿ ಮಾಡಲು ಮುಂದಾದರು. ಧನ, ಕನಕ ಕೀಳುವ ಸನ್ನಾಹ ನಡೆಸಿದರು. ಜ್ಞಾನದ ಗಣಿಯಾಗಿದ್ದ ನಾರದ ಮಹರ್ಷಿಗಳು ಆತನನ್ನು ಮಾತಿನ ಬಲೆಯಲ್ಲಿ ಸಿಲುಕಿಸಿದರು ತಮ್ಮ ವಿವೇಕ ಚಿಂತನವಾಣಿಗಳಿಂದ ಬೇಡನ ಮನ ಮಡಿ ಮಾಡಿದರು. ಮುಚ್ಚಿದ್ದ ಅವನ ಒಳಗಣ್ಣು ತೆರೆಸಿದರು. 'ಬದುಕು ಎಂದರೆ ಕೇವಲ

* ಚಂದ್ರಮೌಳೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು-೫೭೨ ೧೦೪.

ಕೌಟುಂಬಿಕ ಸೇವೆಯಲ್ಲ; ಕೇವಲ ಒಡಲು ತುಂಬುವ ಕೆಲಸವಲ್ಲ. ಬದುಕು ಇರುವುದು ಲೋಕದ ಉದ್ಧಾರಕ್ಕೆ, ಆತ್ಮದ ಉದ್ಧಾರಕ್ಕೆ. ಮಾನವ ಮಾಧವನಾಗುವುದಕ್ಕೆ, ಆ ಶಿವ ಮುಖದಿಂದ ಶಿವಮುಖದತ್ತ ಸಾಗುವುದಕ್ಕೆ. ಮಿಗಿಲಾಗಿ ಲೋಕ ಕಲ್ಯಾಣಕ್ಕೆ' ಎಂದು ಸಾರಿದರು. ಬೇಡನ ಎದೆಯಲ್ಲಿ ಆಧ್ಯಾತ್ಮದ ನಂದಾ ದೀಪವನ್ನು ಹಚ್ಚಿದರು. ನಾರದರ ಸಹವಾಸ ಬೇಡನ ಬದುಕಿನಲ್ಲಿ ದೊಡ್ಡ ವಿಶ್ವಾಸ ಮೂಡಿಸಿತು.

ನಾರದರ ಮಾರ್ಗದರ್ಶನದಲ್ಲಿ ಜ್ಞಾನೋದಯಗೊಂಡ ವಾಲ್ಮೀಕಿ ಮುನಿವರ್ಯರಿಗೆ ಆಧ್ಯಾತ್ಮದ ಹಸಿವು ಹೆಚ್ಚಿತು. ದೇವರನ್ನು ಕಾಣುವ ಹೆಬ್ಬಯಕೆ ಮೂಡಿತು. ಮನೆ ತೊರೆದರು. ಎಲ್ಲರನ್ನೂ ಎಲ್ಲವನ್ನೂ ಮರೆತರು. ಕಠಿಣವಾದ ತಪಸ್ಸು ಮಾಡಿದರು. ಇಹದ ಅರಿವನ್ನೇ ಅರಿಯದಾದರು. ಕುಳಿತಲ್ಲಿಯೇ ಅಚಲರಾಗಿ ಕುಳಿತರು. ಹಸಿವು-ಬಾಯಾರಿಕೆಗಳನ್ನು ಮರೆತರು. ಮೈಮೇಲೆ ಹುತ್ತ ಬೆಳೆಯಿತು. ದಿನಗಳು ಉರುಳಿದವು. ಋತುಗಳು ಮರಳಿದವು. ತಪಸ್ಸು ಫಲ ನೀಡಿತು. ಸಾಧಕನಿಗೆ ಸಿದ್ಧಿಯಾಯಿತು. ಕಡೆಗೆ ಭಗವಂತನ ಕರುಣೆಗೆ ಪಾತ್ರರಾದರು. ಹೊಸ ಬೆಳಕನ್ನು ಕಂಡುಕೊಂಡರು. ಮಹರ್ಷಿ ನಾರದರೆ ಬಂದು ಯೋಗ ನಿದ್ರೆಯಿಂದ ಎಚ್ಚರಿಸಿದರು. ವಾಲ್ಮೀಕಿ ಮುನಿಗಳು ಕಣ್ಣು ತೆರೆದರು. ಹುತ್ತದಿಂದ ಹೊರಬಂದರು. ವಲ್ಮೀಕದಲ್ಲಿ ಕುಳಿತ ನವಜನ್ಮವೆತ್ತಿದ ಅವರಿಗೆ 'ವಾಲ್ಮೀಕಿ'ಗಳೆಂಬ ಹೆಸರು ಬಂದಿತು. ಜೊತೆಗೆ ಮಹರ್ಷಿಗಳೆಂಬ ಪದವೂ ಬಂದು ಕೂಡಿತು. ಅಂದಿನಿಂದ ಅವರು ಧ್ಯಾನ, ಮೌನ, ಚಿಂತನ, ಭಗವದಾರಾಧನೆಯಲ್ಲಿ ಬದುಕನ್ನು ಸವೆಸಿದರು. ವಾಲ್ಮೀಕಿ ಮಹರ್ಷಿಗಳೆಂಬ ಅಭಿದಾನಕ್ಕೆ ಪಾತ್ರರಾದರು. ಲೋಕಕ್ಕೆ ಇಂದು ಶಕ್ತಿಯಾಗಿ ವಿರಾಜಿಸಿದರು.

ಒಮ್ಮೆ ತ್ರಿಲೋಕ ಸಂಚಾರಿಗಳೂ, ಬ್ರಹ್ಮನ ಮಾನಸ ಪುತ್ರರೂ ಆದ ನಾರದ ಮಹರ್ಷಿಗಳು ವಾಲ್ಮೀಕಿಮುನಿಗಳ ಆಶ್ರಮಕ್ಕೆ ಬಂದರು. ವಾಲ್ಮೀಕಿ ಮಹರ್ಷಿಗಳು ತುಂಬು ಹೃದಯದಿಂದ ಸ್ವಾಗತಿಸಿದರು. ಪ್ರೀತ್ಯಾದರಗಳಿಂದ ಉಪಚರಿಸಿದರು. ಭಗವಂತನ ಹಿರಿಮೆ ಗರಿಮೆಗಳನ್ನು ಕುರಿತು ಚಿಂತನೆ ನಡೆಸಿದರು. ಕಡೆಗೆ ವಾಲ್ಮೀಕಿಗಳು ನಾರದರನ್ನು ಕುರಿತು, 'ಪೂಜ್ಯರೇ, ಈಗ ಲೋಕದಲ್ಲಿ ಸಕಲ ಕಲ್ಯಾಣಗುಣಗಳನ್ನು ಒಳಗೊಂಡ ಸತ್ಯಸಂಧನೂ, ಧರ್ಮಜ್ಞನೂ, ದಯಾಪರನೂ, ವಿದ್ಯಾವಂತನೂ, ಪರಮ ಪಾವನನೆನಿಸಿದ ನಿತ್ಯ ನಿರ್ಮಲನೂ ಎನಿಸಿದ ಮಹಾನುಭಾವನುಂಟೆ? ಹಾಗೊಮ್ಮೆ ಇದ್ದಲ್ಲಿ ಆ ಮಹಾಮಾನವನ ಹೆಸರೇನು? ಆತ ಎಲ್ಲಿರುವನು? ಆ ಪುರುಷೋತ್ತಮನ ಬಗ್ಗೆ ತಿಳಿಯಲು ಕುತೂಹಲವಾಗಿದೆ. ಕೃಪೆ ಮಾಡಿ ತಿಳಿಸುವಿರಾಗಿ' ಎಂದು ವಿನಂತಿಸಿದರು. ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿನ ವಿಷಯವನ್ನು ಅರುಹಲು ಸಮರ್ಥರಾದ ನಾರದ ಮುನಿಗಳು ಆ ಪ್ರಶ್ನೆಯಿಂದ ಆನಂದಗೊಂಡರು. ಅಂತರ್ದೃಷ್ಟಿಯಿಂದ ನೋಡಿ, 'ವಾಲ್ಮೀಕಿ ಮಹರ್ಷಿಗಳೇ, ತಾವು ಕೇಳಿದ ಗುಣವಿಶೇಷಗಳಿಂದ ಕೂಡಿದ ವ್ಯಕ್ತಿಗಳಿರುವುದು ದುರ್ಲಭವೇ ಸರಿ. ಆದರೆ, ಪುಣ್ಯವಿಶೇಷದಿಂದ ಅಂತಹ ಪುರುಷೋತ್ತಮನೋರ್ವ ಇದ್ದಾನೆ. ಆತನ ಹೆಸರು ಶ್ರೀರಾಮ, ವೈವಸ್ವತ ಮನುವಿಗೆ ಹಿರಿಯ ಪುತ್ರನೆನಿಸಿದ ಇಕ್ಷ್ವಾಕು ವಂಶದಲ್ಲಿ ಜನಿಸಿದವನು. ಅವನಲ್ಲಿ ನೀವು ಅಪೇಕ್ಷಿಸಿದ ಸರ್ವಗುಣಗಳು ಸಮಾವೇಶಗೊಂಡಿವೆ. ಸ್ವಯಂಪ್ರಕಾಶನಾದ ಶ್ರೀರಾಮನು ಉಜ್ವಲನಾದ ತೇಜಸ್ವಿಯಾಗಿದ್ದಾನೆ. ಗಾಂಭೀರ್ಯದಲ್ಲಿ ಸಾಗರಕ್ಕೂ, ಧೈರ್ಯದಲ್ಲಿ ಹಿಮವತ್‌ಪರ್ವತಕ್ಕೂ ಸಮಾನನಾಗಿದ್ದಾನೆ. ಪುರುಷೋತ್ತಮನಾದ ಆತ ಚರಿತ್ರಾರ್ಹನಾಗಿದ್ದಾನೆ. ಆ ಮಹಾಮಹಿಮನ ಕಥೆಯನ್ನು ಹೇಳುವುದೂ ಪುಣ್ಯ, ಕೇಳುವುದೂ ಪುಣ್ಯ' ಎಂದು ಹೇಳಿದರಲ್ಲದೆ ಸರ್ವಪಾಪವನ್ನು ನೀಗಿ, ಅಖಿಲ ಪುಣ್ಯವನ್ನು ನೀಡುವ ಶತಕೋಟಿ ವಿಸ್ತಾರವಾದ ಶ್ರೀರಾಮಚಂದ್ರನ ದಿವ್ಯಕಥೆಯನ್ನು ಸಂಕ್ಷೇಪಿಸಿ ಹೇಳಿದರು. ಮಹರ್ಷಿ ವಾಲ್ಮೀಕಿಗಳು ಮೈಯೆಲ್ಲಾ ಕಿವಿಯಾಗಿಸಿಕೊಂಡು ಕೇಳಿದರು. ಹೃನ್ಮನಗಳ ತುಂಬಾ ತುಂಬಿಕೊಂಡರು. ಅಮಿತವಾದ ಆನಂದವನ್ನು ಪಟ್ಟರು. ನರೋತ್ತಮನ ದಿವ್ಯಕಥೆಯನ್ನು ಹೃತ್ಪೂರ್ತಿಯಾಗಿ ಹೇಳಿದ ನಾರದ ಮಹರ್ಷಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಿ, ಆದರದಿಂದ ಬೀಳ್ಕೊಟ್ಟರು.

ಶ್ರೀರಾಮನ ದಿವ್ಯಕಥೆಯನ್ನು ಕೇಳಿ ಪುಳಕಿತರಾದ ವಾಲ್ಮೀಕಿ ಮುನಿಗಳು ಆಶ್ರಮದಲ್ಲಿ ಮುಹೂರ್ತಕಾಲ ಉಳಿದರು. ಮಧ್ಯಾಹ್ನದ ಆಹ್ನಿಕ ಕ್ರಿಯೆಗಾಗಿ ತಮಸಾ ನದಿಯ ತೀರದಲ್ಲಿದ್ದ ಸ್ನಾನಘಟ್ಟವನ್ನು ಅರಸುತ್ತಾ ಹೊರಟರು. ಗುರುವರ್ಯರ ಸಂಗಡ ಕಮಂಡಲ, ನಾರುಬಟ್ಟೆಯನ್ನು ಹಿಡಿದ ಭರದ್ವಾಜ ಎಂಬ ಶಿಷ್ಯನೂ





ಹೊರಟನು. ಗುರುಗಳು ಮುಂದೆ ಶಿಷ್ಯನು ಹಿಂದೆ ಮೌನವಾಗಿ ಮುನ್ನಡೆದರು.

ತಮಸಾ ನದಿ ಮಂಜುಳವಾದ ಕಲರವ ಮಾಡುತ್ತ ಹರಿಯುತ್ತಿತ್ತು. ಮರಗಿಡಗಳು ಮುಗಿಲು ಮುಟ್ಟುವಂತೆ ಬೆಳೆದಿದ್ದವು. ಅರಳಿದ ನಾನಾ ಬಗೆಯ ಕುಸುಮಗಳು ಸುಗಂಧ ಸೂಸುತ್ತಿದ್ದವು. ಗಾಳಿ ಹಿತವಾಗಿ ತೀಡುತ್ತಿತ್ತು. ಇಡೀ ವನವೆಲ್ಲಾ ಶಾಂತಿಧಾಮವಾಗಿ ಮೌನ ತಾಳಿತ್ತು. ತಿಳಿಯಾಗಿ ಹರಿಯುವ ನದಿಯ ನೀರನ್ನು ನೋಡಿದ ವಾಲ್ಮೀಕಿಗಳು ಶಿಷ್ಯನನ್ನು ಕುರಿತು, 'ಓ ಭರದ್ವಾಜ, ತಮಸಾ ನದಿಯ ನೀರನ್ನು ನೋಡು, ಸತ್ಪುರುಷರ ಮನಸ್ಸಿನಂತೆ ಎಷ್ಟು ನಿರ್ಮಲವಾಗಿರುವುದು! ನಾನು ಇಂದು ಇಲ್ಲಿಯೇ ಸ್ನಾನ ಮಾಡುವೆ. ಕಮಂಡಲವನ್ನು ಇಡು, ನಾರುಡುಗೆಯನ್ನು ಕೊಡು' ಎಂದು ನುಡಿದು, ನಿಂತಲ್ಲೇ ಪ್ರಕೃತಿಯ ಸೊಬಗನ್ನು ವೀಕ್ಷಿಸುತ್ತಾ ನಿಂತರು. ಅಲ್ಲಿ ಎರಡು ಕ್ರೌಂಚ ಪಕ್ಷಿಗಳು ಒಗ್ಗೂಡಿ, ಲಾಸ್ಯೋಲ್ಲಾಸದಲ್ಲಿ ಮುಳುಗಿ, ಹಾರಾಡುತ್ತಿರುವ ಭಾವಭಂಗಿಗಳಿಂದ ವಾಲ್ಮೀಕಿಗಳ ಮನವನ್ನು ತಮ್ಮತ್ತ ಸೆಳೆಯುವಲ್ಲಿ ಯಶಸ್ವಿಯಾದುವು. ಕೊಕ್ಕರೆಗಳ ಕೂಜನ ಕರ್ಣಾನಂದಕರವಾಗಿತ್ತು. ಗಂಡು-ಹೆಣ್ಣು ಕೂಡಿ ಕ್ಷಣಕಾಲವೂ ನಾವು ಅಗಲಿ ಬಾಳೆವು ಎಂದು ಹೇಳುವಂತೆ ಒಗ್ಗೂಡಿ ನಲಿಯುತ್ತಿದ್ದವು. ಆ ಪಕ್ಷಿಗಳ ನಲಿದಾಟವನ್ನು ಮಹರ್ಷಿಗಳು ನೋಡುತ್ತಿರುವಂತೆಯೇ ಆಗಬಾರದ ಅನಾಹುತವಾಯಿತು. ವೈರನಿಲಯನಾದ ಬೇಡನೋರ್ವನು ಆ ಕ್ರೌಂಚ ಜೋಡಿಗಳಲ್ಲಿ ಗಂಡುಪಕ್ಷಿಗೆ ಬಾಣವನ್ನು ಹೂಡಿ, ಗುರಿಯಿಟ್ಟು ಹೊಡೆದನು. ಬಾಣ ನೆಟ್ಟು ಕೆನ್ನೆತ್ತರು ಉಕ್ಕಿ ಹರಿಯಿತು. ಪೆಟ್ಟಿನಿಂದ ಜರ್ಜರಿತವಾಗಿ ತೊಪ್ಪನೆ ನೆಲದ ಮೇಲೆ ಉರುಳಿತು. ರಕ್ತದಿಂದ ನೆನೆದ ಪಕ್ಷಿ ವಿಲವಿಲನೆ ಒದ್ದಾಡಿತು. ಸಾವಿನ ಅಂಚಿನಲ್ಲಿದ್ದು ಅಸಹನೀಯ ಸಂಕಟ ಪಡುತ್ತಿರುವ ಗಂಡು ಕ್ರೌಂಚದ ಅಸಹಾಯಕ ಸ್ಥಿತಿ ಕಂಡು ಹೆಣ್ಣು ಕ್ರೌಂಚ ರೋಧಿಸಿತು. ಕಂಡವರ ಎದೆ ಬಿರಿಯುವಂತಹ ಕರುಣಾಜನಕ ದೃಶ್ಯ ಅದಾಗಿತ್ತು. ಗಂಡು ಕೊಕ್ಕರೆಯ ದುಃಸ್ಥಿತಿ ಕಂಡು ಮಹಾತ್ಮರಾದ ವಾಲ್ಮೀಕಿ ಮುನಿಗಳ ಮನ ಮಮ್ಮಲು ಮರುಗಿತು. ಜೊತೆಯಲ್ಲೇ ಕರುಣೆಯೂ ಚಿಮ್ಮಿತು. ಪಕ್ಷಿಯನ್ನು ಕೊಂದ ಕಾರ್ಯವು ಅಮಾನವೀಯ ಎಂದೆನಿಸಿತು. ಸ್ವಧರ್ಮಚಾರಿಯಾದ ಬೇಡನು ಅಧರ್ಮಚಾರಿಯಾಗಿ ಕಂಡನು. ಮತ್ತೊಮ್ಮೆ ಪಕ್ಷಿಯ ದೈನ್ಯಸ್ಥಿತಿ ಕಂಡು ಮನಸ್ಸು ಕರುಣಾರಸ ಕಡಲಾಯಿತು. ಒಡನೆಯೆ ಮಹಾಮುನಿ ಬಾಯಿಂದ ಕವಿದ ಶೋಕವು ಶ್ಲೋಕರೂಪದ ಕಾವ್ಯವಾಣಿಯಾಗಿ ಹೊರಬಿದ್ದಿತು;

*ಮಾ ನಿಷಾದ ಪ್ರತಿಷ್ಠಾಮ್ ತ್ವಮಗಮಃ ಶಾಶ್ವತೀಃ ಸಮಾಃ।*
*ಯ ತ್ಕ್ರೌಞ್ಚ ಮಿಥುನಾದೇಕಮವಧೀಃ ಕಾಮ ಮೋಹಿತಮ್॥*

'ಎಲೈ ಬೇಡನೇ, ಕಾಮಮೋಹಿತವಾದ ಕ್ರೌಂಚ ದಂಪತಿಗಳಲ್ಲಿ ಒಂದಾದ ಗಂಡು ಪಕ್ಷಿಯನ್ನು ಹೊಡೆದು ಕೊಂದೆ. ನಿನಗೂ ಕೂಡ ಬಾಳಿನಲ್ಲಿ ನೆಲೆಯಿಲ್ಲದಂತಾಗಲಿ'.

ಬೇಡನಿಗೆ ಶಾಪವನ್ನು ಕೊಟ್ಟದ್ದಾಯಿತು. ಆದರೆ ಶಾಪವಿತ್ತ ಮಹರ್ಷಿಗಳ ಮನದಲ್ಲಿ ಒಡನೆಯೆ ಶಾಪವೂ ಮೂಡಿತು. ಕ್ರೌಂಚಪಕ್ಷಿಯ ದುಃಖಕ್ಕೆ ಮರುಗಿ, ಶೋಕಪೀಡಿತನಾಗಿ ನಾನು ಎಂತಹ ಕೆಲಸ ಮಾಡಿಬಿಟ್ಟೆ? ನಾನೇಕೆ ಬೇಡನಿಗೆ ಶಾಪ ಕೊಟ್ಟೆ? ಕೋಪಕ್ಕೆ ನಾನೇಕೆ ವಶನಾದೆ? ಎಂದು ಮರುಗಿದರು. ಕ್ಷಣಕಾಲ ಬಿಟ್ಟು ಪ್ರಿಯಶಿಷ್ಯ ಭರದ್ವಾಜನನ್ನು ಕುರಿತು, 'ಹೆಣ್ಣುಹಕ್ಕಿಯ ಸಂಕಟ ಕಂಡು ಶೋಕಪೀಡಿತನಾದೆನು. ನನ್ನ ಬಾಯಿಂದ ಆಗ ಹೊರಬಿದ್ದ ವಾಣಿಯು ನಾಲ್ಕು ಪಾದಗಳಿಂದ ಕೂಡಿದೆ. ಸಮಾಕ್ಷರವುಳ್ಳದ್ದಾಗಿದೆ. ಪ್ರಾಸಬದ್ಧವಾಗಿದೆ. ತಂತಿವಾದ್ಯಗಳೊಡನೆ ಹಾಡಲು ಯೋಗ್ಯವಾಗಿದೆ. ಮಿಗಿಲಾಗಿ ಲಯಬದ್ಧವಾದ ಶ್ಲೋಕವಾಗಿದೆ ಅಲ್ಲವೇ?' ಎಂದು ಹೇಳಿದರು. ಒಡನೆಯೇ ಶಿಷ್ಯ ಬರೆದುಕೊಂಡ. ಕಂಠಪಾಠ ಮಾಡಿದ. ಶೋಕದ ವಾತಾವರಣದಲ್ಲೂ ಒಂದು ಬಗೆಯ ಆನಂದ ಕಂಡ. ಮನವನ್ನು ಕದಡಿದ ಶೋಕವು, ಶ್ಲೋಕರೂಪವಾಗಿ ಅಭಿವ್ಯಕ್ತಗೊಂಡ ಮೇಲೆ ಮಹರ್ಷಿಗಳ ಮನವು ತಿಳಿಯಾಯಿತು. ನದಿಯಲ್ಲಿ ಮಿಂದು, ನಾರುಡಿಗೆಯುಟ್ಟು ಆಶ್ರಮದ ಕಡೆಗೆ ಮರಳಿದರು.

ಅಂದು ವಾಲ್ಮೀಕಿಗಳ ಮನಸ್ಥಿತಿ ಎಂದಿನಂತಿರದೆ ಬೇರೊಂದು ಬಗೆಯದಾಗಿತ್ತು. ಕ್ರೌಂಚಪಕ್ಷಿಯ ವಧೆಯಾದಾಗ ಅಪ್ರಯತ್ನಪೂರ್ವಕವಾಗಿ ಮೂಡಿ ಬಂದ ಶ್ಲೋಕವು ಮತ್ತೆ ಮತ್ತೆ ಅನುರಣನಗೊಳ್ಳುತ್ತಿತ್ತು. ಆ ಪ್ರಸಂಗವನ್ನೇ ಕುರಿತು ಚಿಂತನ ಮಂಥನ ನಡೆಸುತ್ತಿರುವಾಗ ಸೃಷ್ಟಿಕರ್ತನಾದ ಬ್ರಹ್ಮದೇವನು ಬಂದನು. ಆಯಾಚಿತವಾಗಿ

ಕೌಟುಂಬಿಕ ಸೇವೆಯಲ್ಲ; ಕೇವಲ ಒಡಲು ತುಂಬುವ ಕೆಲಸವಲ್ಲ. ಬದುಕು ಇರುವುದು ಲೋಕದ ಉದ್ಧಾರಕ್ಕೆ, ಆತ್ಮದ ಉದ್ಧಾರಕ್ಕೆ. ಮಾನವ ಮಾಧವನಾಗುವುದಕ್ಕೆ, ಆ ಶಿವ ಮುಖದಿಂದ ಶಿವಮುಖದತ್ತ ಸಾಗುವುದಕ್ಕೆ, ಮಿಗಿಲಾಗಿ ಲೋಕ ಕಲ್ಯಾಣಕ್ಕೆ' ಎಂದು ಸಾರಿದರು. ಬೇಡನ ಎದೆಯಲ್ಲಿ ಆಧ್ಯಾತ್ಮದ ನಂದಾ ದೀಪವನ್ನು ಹಚ್ಚಿದರು. ನಾರದರ ಸಹವಾಸ ಬೇಡನ ಬದುಕಿನಲ್ಲಿ ದೊಡ್ಡ ವಿಶ್ವಾಸ ಮೂಡಿಸಿತು.

ನಾರದರ ಮಾರ್ಗದರ್ಶನದಲ್ಲಿ ಜ್ಞಾನೋದಯಗೊಂಡ ವಾಲ್ಮೀಕಿ ಮುನಿವರ್ಯರಿಗೆ ಆಧ್ಯಾತ್ಮದ ಹಸಿವು ಹೆಚ್ಚಿತು. ದೇವರನ್ನು ಕಾಣುವ ಹೆಬ್ಬಯಕೆ ಮೂಡಿತು. ಮನೆ ತೊರೆದರು. ಎಲ್ಲರನ್ನೂ ಎಲ್ಲವನ್ನೂ ಮರೆತರು. ಕಠಿಣವಾದ ತಪಸ್ಸು ಮಾಡಿದರು. ಇಹದ ಅರಿವನ್ನೇ ಅರಿಯದಾದರು. ಕುಳಿತಲ್ಲಿಯೇ ಅಚಲರಾಗಿ ಕುಳಿತರು. ಹಸಿವು–ಬಾಯಾರಿಕೆಗಳನ್ನು ಮರೆತರು. ಮೈಮೇಲೆ ಹುತ್ತ ಬೆಳೆಯಿತು. ದಿನಗಳು ಉರುಳಿದವು. ಋತುಗಳು ಮರಳಿದವು. ತಪಸ್ಸು ಫಲ ನೀಡಿತು. ಸಾಧಕನಿಗೆ ಸಿದ್ಧಿಯಾಯಿತು. ಕಡೆಗೆ ಭಗವಂತನ ಕರುಣೆಗೆ ಪಾತ್ರರಾದರು. ಹೊಸ ಬೆಳಕನ್ನು ಕಂಡುಕೊಂಡರು. ಮಹರ್ಷಿ ನಾರದರೆ ಬಂದು ಯೋಗ ನಿದ್ರೆಯಿಂದ ಎಚ್ಚರಿಸಿದರು. ವಾಲ್ಮೀಕಿ ಮುನಿಗಳು ಕಣ್ಣು ತೆರೆದರು. ಹುತ್ತದಿಂದ ಹೊರಬಂದರು. ವಲ್ಮೀಕದಲ್ಲಿ ಕುಳಿತ ನವಜನ್ಮವೆತ್ತಿದ ಅವರಿಗೆ 'ವಾಲ್ಮೀಕಿ'ಗಳೆಂಬ ಹೆಸರು ಬಂದಿತು. ಜೊತೆಗೆ ಮಹರ್ಷಿಗಳೆಂಬ ಪದವೂ ಬಂದು ಕೂಡಿತು. ಅಂದಿನಿಂದ ಅವರು ಧ್ಯಾನ, ಮೌನ, ಚಿಂತನ, ಭಗವದಾರಾಧನೆಯಲ್ಲಿ ಬದುಕನ್ನು ಸವೆಸಿದರು. ವಾಲ್ಮೀಕಿ ಮಹರ್ಷಿಗಳೆಂಬ ಅಭಿದಾನಕ್ಕೆ ಪಾತ್ರರಾದರು. ಲೋಕಕ್ಕೆ ಇಂದು ಶಕ್ತಿಯಾಗಿ ವಿರಾಜಿಸಿದರು.

ಒಮ್ಮೆ ತ್ರಿಲೋಕ ಸಂಚಾರಿಗಳೂ, ಬ್ರಹ್ಮನ ಮಾನಸ ಪುತ್ರರೂ ಆದ ನಾರದ ಮಹರ್ಷಿಗಳು ವಾಲ್ಮೀಕಿಮುನಿಗಳ ಆಶ್ರಮಕ್ಕೆ ಬಂದರು. ವಾಲ್ಮೀಕಿ ಮಹರ್ಷಿಗಳು ತುಂಬು ಹೃದಯದಿಂದ ಸ್ವಾಗತಿಸಿದರು. ಪ್ರೀತ್ಯಾದರಗಳಿಂದ ಉಪಚರಿಸಿದರು. ಭಗವಂತನ ಹಿರಿಮೆ ಗರಿಮೆಗಳನ್ನು ಕುರಿತು ಚಿಂತನೆ ನಡೆಸಿದರು. ಕಡೆಗೆ ವಾಲ್ಮೀಕಿಗಳು ನಾರದರನ್ನು ಕುರಿತು. 'ಪೂಜ್ಯರೇ, ಈಗ ಲೋಕದಲ್ಲಿ ಸಕಲ ಕಲ್ಯಾಣಗುಣಗಳನ್ನು ಒಳಗೊಂಡ ಸತ್ಯಸಂಧನೂ, ಧರ್ಮಜ್ಞನೂ, ದಯಾಪರನೂ, ವಿದ್ಯಾವಂತನೂ, ಪರಮ ಪಾವನನೆನಿಸಿದ ನಿತ್ಯ ನಿರ್ಮಲನೂ ಎನಿಸಿದ ಮಹಾನುಭಾವನುಂಟೆ? ಹಾಗೊಮ್ಮೆ ಇದ್ದಲ್ಲಿ ಆ ಮಹಾಮಾನವನ ಹೆಸರೇನು? ಆತ ಎಲ್ಲಿರುವನು? ಆ ಪುರುಷೋತ್ತಮನ ಬಗ್ಗೆ ತಿಳಿಯಲು ಕುತೂಹಲವಾಗಿದೆ. ಕೃಪೆ ಮಾಡಿ ತಿಳಿಸುವಿರಾಗಿ' ಎಂದು ವಿನಂತಿಸಿದರು. ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿನ ವಿಷಯವನ್ನು ಅರುಹಲು ಸಮರ್ಥರಾದ ನಾರದ ಮುನಿಗಳು ಆ ಪ್ರಶ್ನೆಯಿಂದ ಆನಂದಗೊಂಡರು. ಅಂತರ್ದೃಷ್ಟಿಯಿಂದ ನೋಡಿ, 'ವಾಲ್ಮೀಕಿ ಮಹರ್ಷಿಗಳೇ, ತಾವು ಕೇಳಿದ ಗುಣವಿಶೇಷಗಳಿಂದ ಕೂಡಿದ ವ್ಯಕ್ತಿಗಳಿರುವುದು ದುರ್ಲಭವೇ ಸರಿ. ಆದರೆ, ಪುಣ್ಯವಿಶೇಷದಿಂದ ಅಂತಹ ಪುರುಷೋತ್ತಮನೋರ್ವ ಇದ್ದಾನೆ. ಆತನ ಹೆಸರು ಶ್ರೀರಾಮ, ವೈವಸ್ವತ ಮನುವಿಗೆ ಹಿರಿಯ ಪುತ್ರನೆನಿಸಿದ ಇಕ್ಷ್ವಾಕು ವಂಶದಲ್ಲಿ ಜನಿಸಿದವನು. ಅವನಲ್ಲಿ ನೀವು ಅಪೇಕ್ಷಿಸಿದ ಸರ್ವಗುಣಗಳು ಸಮಾವೇಶಗೊಂಡಿವೆ. ಸ್ವಯಂಪ್ರಕಾಶನಾದ ಶ್ರೀರಾಮನು' ಉಜ್ವಲನಾದ ತೇಜಸ್ವಿಯಾಗಿದ್ದಾನೆ. ಗಾಂಭೀರ್ಯದಲ್ಲಿ ಸಾಗರಕ್ಕೂ, ಧೈರ್ಯದಲ್ಲಿ ಹಿಮವತ್‌ಪರ್ವತಕ್ಕೂ ಸಮಾನನಾಗಿದ್ದಾನೆ. ಪುರುಷೋತ್ತಮನಾದ ಆತ ಚರಿತ್ರಾರ್ಹನಾಗಿದ್ದಾನೆ. ಆ ಮಹಾಮಹಿಮನ ಕಥೆಯನ್ನು ಹೇಳುವುದೂ ಪುಣ್ಯ, ಕೇಳುವುದೂ ಪುಣ್ಯ' ಎಂದು ಹೇಳಿದರಲ್ಲದೆ ಸರ್ವಪಾಪವನ್ನು ನೀಗಿ, ಅಖಿಲ ಪುಣ್ಯವನ್ನು ನೀಡುವ ಶತಕೋಟಿ ವಿಸ್ತಾರವಾದ ಶ್ರೀರಾಮಚಂದ್ರನ ದಿವ್ಯಕಥೆಯನ್ನು ಸಂಕ್ಷೇಪಿಸಿ ಹೇಳಿದರು. ಮಹರ್ಷಿ ವಾಲ್ಮೀಕಿಗಳು ಮೈಯೆಲ್ಲಾ ಕಿವಿಯಾಗಿಸಿಕೊಂಡು ಕೇಳಿದರು. ಹೃನ್ಮನಗಳ ತುಂಬಾ ತುಂಬಿಕೊಂಡರು. ಅಮಿತವಾದ ಆನಂದವನ್ನು ಪಟ್ಟರು. ನರೋತ್ತಮನ ದಿವ್ಯಕಥೆಯನ್ನು ಹೃತ್ಸ್ಪರ್ಶಿಯಾಗಿ ಹೇಳಿದ ನಾರದ ಮಹರ್ಷಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಿ, ಆದರದಿಂದ ಬೀಳ್ಕೊಟ್ಟರು.

ಶ್ರೀರಾಮನ ದಿವ್ಯಕಥೆಯನ್ನು ಕೇಳಿ ಪುಳಕಿತರಾದ ವಾಲ್ಮೀಕಿ ಮುನಿಗಳು ಆಶ್ರಮದಲ್ಲಿ ಮುಹೂರ್ತಕಾಲ ಉಳಿದರು. ಮಧ್ಯಾಹ್ನದ ಆಹ್ನಿಕ ಕ್ರಿಯೆಗಾಗಿ ತಮಸಾ ನದಿಯ ತೀರದಲ್ಲಿದ್ದ ಸ್ನಾನಘಟ್ಟವನ್ನು ಅರಸುತ್ತಾ ಹೊರಟರು. ಗುರುವರ್ಯರ ಸಂಗಡ ಕಮಂಡಲ, ನಾರುಬಟ್ಟೆಯನ್ನು ಹಿಡಿದ ಭರದ್ವಾಜ ಎಂಬ ಶಿಷ್ಯನೂ





ಹೊರಟನು. ಗುರುಗಳು ಮುಂದೆ ಶಿಷ್ಯನು ಹಿಂದೆ ಮೌನವಾಗಿ ಮುನ್ನಡೆದರು.

ತಮಸಾ ನದಿ ಮಂಜುಳವಾದ ಕಲರವ ಮಾಡುತ್ತ ಹರಿಯುತ್ತಿತ್ತು. ಮರಗಿಡಗಳು ಮುಗಿಲು ಮುಟ್ಟುವಂತೆ ಬೆಳೆದಿದ್ದವು. ಅರಳಿದ ನಾನಾ ಬಗೆಯ ಕುಸುಮಗಳು ಸುಗಂಧ ಸೂಸುತ್ತಿದ್ದವು. ಗಾಳಿ ಹಿತವಾಗಿ ತೀಡುತ್ತಿತ್ತು] ಇಡೀ ವನವೆಲ್ಲಾ ಶಾಂತಿಧಾಮವಾಗಿ ಮೌನ ತಾಳಿತ್ತು. ತಿಳಿಯಾಗಿ ಹರಿಯುವ ನದಿಯ ನೀರನ್ನು ನೋಡಿದ ವಾಲ್ಮೀಕಿಗಳು ಶಿಷ್ಯನನ್ನು ಕುರಿತು, 'ಓ ಭರದ್ವಾಜ, ತಮಸಾ ನದಿಯ ನೀರನ್ನು ನೋಡು, ಸತ್ಪುರುಷರ ಮನಸ್ಸಿನಂತೆ ಎಷ್ಟು ನಿರ್ಮಲವಾಗಿರುವುದು! ನಾನು ಇಂದು ಇಲ್ಲಿಯೇ ಸ್ನಾನ ಮಾಡುವೆ. ಕಮಂಡಲವನ್ನು ಇಡು, ನಾರುಡುಗೆಯನ್ನು ಕೊಡು' ಎಂದು ನುಡಿದು, ನಿಂತಲ್ಲೇ ಪ್ರಕೃತಿಯ ಸೊಬಗನ್ನು ವೀಕ್ಷಿಸುತ್ತಾ ನಿಂತರು. ಅಲ್ಲಿ ಎರಡು ಕ್ರೌಂಚ ಪಕ್ಷಿಗಳು ಒಗ್ಗೂಡಿ, ಲಾಸ್ಯೋಲ್ಲಾಸದಲ್ಲಿ ಮುಳುಗಿ, ಹಾರಾಡುತ್ತಿರುವ ಭಾವಭಂಗಿಗಳಿಂದ ವಾಲ್ಮೀಕಿಗಳ ಮನವನ್ನು ತಮ್ಮತ್ತ ಸೆಳೆಯುವಲ್ಲಿ ಯಶಸ್ವಿಯಾದುವು. ಕೊಕ್ಕರೆಗಳ ಕೂಜನ ಕರ್ಣಾನಂದಕರವಾಗಿತ್ತು. ಗಂಡು–ಹೆಣ್ಣು ಕೂಡಿ ಕ್ಷಣಕಾಲವೂ ನಾವು ಅಗಲಿ ಬಾಳೆವು ಎಂದು ಹೇಳುವಂತೆ ಒಗ್ಗೂಡಿ ನಲಿಯುತ್ತಿದ್ದವು. ಆ ಪಕ್ಷಿಗಳ ನಲಿದಾಟವನ್ನು ಮಹರ್ಷಿಗಳು ನೋಡುತ್ತಿರುವಂತೆಯೇ ಆಗಬಾರದ ಅನಾಹುತವಾಯಿತು. ವೈರನಿಲಯನಾದ ಬೇಡನೋರ್ವನು ಆ ಕ್ರೌಂಚ ಜೋಡಿಗಳಲ್ಲಿ ಗಂಡುಪಕ್ಷಿಗೆ ಬಾಣವನ್ನು ಹೂಡಿ, ಗುರಿಯಿಟ್ಟು ಹೊಡೆದನು. ಬಾಣ ನೆಟ್ಟು ಕೆನ್ನೆತ್ತರು ಉಕ್ಕಿ ಹರಿಯಿತು. ಪೆಟ್ಟಿನಿಂದ ಜರ್ಜರಿತವಾಗಿ ತೊಪ್ಪನೆ ನೆಲದ ಮೇಲೆ ಉರುಳಿತು. ರಕ್ತದಿಂದ ನೆನೆದ ಪಕ್ಷಿ ವಿಲವಿಲನೆ ಒದ್ದಾಡಿತು. ಸಾವಿನ ಅಂಚಿನಲ್ಲಿದ್ದು ಅಸಹನೀಯ ಸಂಕಟ ಪಡುತ್ತಿರುವ ಗಂಡು ಕ್ರೌಂಚದ ಅಸಹಾಯಕ ಸ್ಥಿತಿ ಕಂಡು ಹೆಣ್ಣು ಕ್ರೌಂಚ ರೋಧಿಸಿತು. ಕಂಡವರ ಎದೆ ಬಿರಿಯುವಂತಹ ಕರುಣಾಜನಕ ದೃಶ್ಯ ಅದಾಗಿತ್ತು. ಗಂಡು ಕೊಕ್ಕರೆಯ ದುಃಸ್ಥಿತಿ ಕಂಡು ಮಹಾತ್ಮರಾದ ವಾಲ್ಮೀಕಿ ಮುನಿಗಳ ಮನ ಮಮ್ಮಲು ಮರುಗಿತು. ಜೊತೆಯಲ್ಲೇ ಕರುಣೆಯೂ ಚಿಮ್ಮಿತು. ಪಕ್ಷಿಯನ್ನು ಕೊಂದ ಕಾರ್ಯವು ಅಮಾನವೀಯ ಎಂದೆನಿಸಿತು. ಸ್ವಧರ್ಮಚಾರಿಯಾದ ಬೇಡನು ಅಧರ್ಮಚಾರಿಯಾಗಿ ಕಂಡನು. ಮತ್ತೊಮ್ಮೆ ಪಕ್ಷಿಯ ದೈನ್ಯಸ್ಥಿತಿ ಕಂಡು ಮನಸ್ಸು ಕರುಣಾರಸ ಕಡಲಾಯಿತು. ಒಡನೆಯೆ ಮಹಾಮುನಿ ಬಾಯಿಂದ ಕವಿದ ಶೋಕವು ಶ್ಲೋಕರೂಪದ ಕಾವ್ಯವಾಣಿಯಾಗಿ ಹೊರ ಬಿದ್ದಿತು;

***ಮಾ ನಿಷಾದ ಪ್ರತಿಷ್ಠಾಮ್ ತ್ವಮಗಮಃ ಶಾಶ್ವತೀಃ ಸಮಾಃ।***
***ಯ ತ್ಕ್ರೌಞ್ಚ ಮಿಥುನಾದೇಕಮವಧೀಃ ಕಾಮ ಮೋಹಿತಮ್॥***

'ಎಲೈ ಬೇಡನೇ, ಕಾಮಮೋಹಿತವಾದ ಕ್ರೌಂಚ ದಂಪತಿಗಳಲ್ಲಿ ಒಂದಾದ ಗಂಡು ಪಕ್ಷಿಯನ್ನು ಹೊಡೆದು ಕೊಂದೆ. ನಿನಗೂ ಕೂಡ ಬಾಳಿನಲ್ಲಿ ನೆಲೆಯಿಲ್ಲದಂತಾಗಲಿ'.

ಬೇಡನಿಗೆ ಶಾಪವನ್ನು ಕೊಟ್ಟದ್ದಾಯಿತು. ಆದರೆ ಶಾಪವಿತ್ತ ಮಹರ್ಷಿಗಳ ಮನದಲ್ಲಿ ಒಡನೆಯೆ ಶಾಪವೂ ಮೂಡಿತು. ಕ್ರೌಂಚಪಕ್ಷಿಯ ದುಃಖಕ್ಕೆ ಮರುಗಿ, ಶೋಕ ಪೀಡಿತನಾಗಿ ನಾನು ಎಂತಹ ಕೆಲಸ ಮಾಡಿಬಿಟ್ಟೆ? ನಾನೇಕೆ ಬೇಡನಿಗೆ ಶಾಪ ಕೊಟ್ಟೆ? ಕೋಪಕ್ಕೆ ನಾನೇಕೆ ವಶನಾದೆ? ಎಂದು ಮರುಗಿದರು. ಕ್ಷಣಕಾಲ ಬಿಟ್ಟು ಪ್ರಿಯಶಿಷ್ಯ ಭರಧ್ವಾಜನನ್ನು ಕುರಿತು, 'ಹೆಣ್ಣುಹಕ್ಕಿಯ ಸಂಕಟ ಕಂಡು ಶೋಕಪೀಡಿತನಾದೆನು. ನನ್ನ ಬಾಯಿಂದ ಆಗ ಹೊರಬಿದ್ದ ವಾಣಿಯು ನಾಲ್ಕು ಪಾದಗಳಿಂದ ಕೂಡಿದೆ. ಸಮಾಕ್ಷರವುಳ್ಳದ್ದಾಗಿದೆ. ಪ್ರಾಸಬದ್ಧವಾಗಿದೆ. ತಂತಿವಾದ್ಯಗಳೊಡನೆ ಹಾಡಲು ಯೋಗ್ಯವಾಗಿದೆ. ಮಿಗಿಲಾಗಿ ಲಯಬದ್ಧವಾದ ಶ್ಲೋಕವಾಗಿದೆ ಅಲ್ಲವೇ?' ಎಂದು ಹೇಳಿದರು. ಒಡನೆಯೇ ಶಿಷ್ಯ ಬರೆದುಕೊಂಡ. ಕಂಠಪಾಠ ಮಾಡಿದ. ಶೋಕದ ವಾತಾವರಣದಲ್ಲೂ ಒಂದು ಬಗೆಯ ಆನಂದ ಕಂಡ. ಮನವನ್ನು ಕದಡಿದ ಶೋಕವು, ಶ್ಲೋಕರೂಪವಾಗಿ ಅಭಿವ್ಯಕ್ತಗೊಂಡ ಮೇಲೆ ಮಹರ್ಷಿಗಳ ಮನವು ತಿಳಿಯಾಯಿತು. ನದಿಯಲ್ಲಿ ಮಿಂದು, ನಾರುಡಿಗೆಯುಟ್ಟು ಆಶ್ರಮದ ಕಡೆಗೆ ಮರಳಿದರು.

ಅಂದು ವಾಲ್ಮೀಕಿಗಳ ಮನಸ್ಥಿತಿ ಎಂದಿನಂತಿರದೆ ಬೇರೊಂದು ಬಗೆಯದಾಗಿತ್ತು. ಕ್ರೌಂಚಪಕ್ಷಿಯ ವಧೆಯಾದಾಗ ಅಪ್ರಯತ್ನಪೂರ್ವಕವಾಗಿ ಮೂಡಿ ಬಂದ ಶ್ಲೋಕವು ಮತ್ತೆ ಮತ್ತೆ ಅನುರಣಗೊಳ್ಳುತ್ತಿತ್ತು. ಆ ಪ್ರಸಂಗವನ್ನೇ ಕುರಿತು ಚಿಂತನ ಮಂಥನ ನಡೆಸುತ್ತಿರುವಾಗ ಸೃಷ್ಟಿಕರ್ತನಾದ ಬ್ರಹ್ಮದೇವನು ಬಂದನು. ಆಯಾಚಿತವಾಗಿ

ಬಂದ ಚತುರ್ಮುಖನನ್ನು ಮುನಿಯು ಪ್ರೀತ್ಯಾದರಗಳಿಂದ ಸ್ವಾಗತಿಸಿ, ಯಥೋಚಿತ ಸತ್ಕಾರ ಮಾಡಿ ವಂದಿಸಿದನು. ಬ್ರಹ್ಮದೇವನು ಮಹರ್ಷಿಯ ಅಂತರ್ಗತವಾದ ವಿಷಯ ತಿಳಿದು ಸಂತಸಗೊಂಡನು. ನಂತರ ವಾಲ್ಮೀಕಿ ಮುನಿವರರನ್ನು ಉದ್ದೇಶಿಸಿ, 'ಮಹರ್ಷಿಯೇ ನನ್ನಯ ಅನುಗ್ರಹದಿಂದಲೇ ನಿನ್ನಲ್ಲಿ ಶ್ಲೋಕರೂಪವಾದ ಸಕಲ ಗುಣಭರಿತನಾದ ಶ್ರೀರಾಮನ ದಿವ್ಯಕಥೆಯನ್ನು ರಚಿಸುವವನಾಗು. ಈ ಹಿಂದೆಯೇ ನಾರದರು ಹೇಳಿದ ಶ್ರೀರಾಮನ ದಿವ್ಯಚರಿತೆಯು ನಿನ್ನಂತರಂಗವನ್ನು ತುಂಬಿಕೊಂಡಿದೆ. ಆ ಮಹಾನುಭಾವನ ಕಥೆಯನ್ನು ಶ್ಲೋಕರೂಪವಾಗಿ ರಚಿಸು. ನಿನಗೆ ಮಹಾಯಶಸ್ಸಿ ಲಭಿಸುವುದು, 'ನಿನ್ನಿಂದ ರಚಿಸಲ್ಪಟ್ಟ ಆ ಮಹಾಕಾವ್ಯವು, ಈ ಧರೆಯ ಮೇಲೆ ಎಲ್ಲಿಯವರೆವಿಗೂ ಗಿರಿಪರ್ವತಗಳು, ನದಿ-ನದಗಳೂ ಇರುತ್ತವೆಯೋ ಅಲ್ಲಿಯವರೆಗೂ ಪ್ರಚಾರದಲ್ಲಿರುತ್ತದೆ' ಎಂದು ತುಂಬು ಮನದಿಂದ ಹರಸಿದನು. ಹರ್ಷಚಿತ್ತನಾದ ವಾಲ್ಮೀಕಿ ಮುನಿವರರನು ನಾಲ್ಮೊಗನನ್ನು ಸತ್ಕರಿಸಿ ಆದರದಿಂದ ಬೀಳ್ಕೊಟ್ಟನು.

ಮಹರ್ಷಿ ನಾರದಮುನಿಗಳು ಬಿತ್ತಿದ ರಾಮಬೀಜವು ಬ್ರಹ್ಮದೇವರ ಕೃಪಾಶೀರ್ವಾದದಿಂದ ಮಹಾಮುನಿ ವಾಲ್ಮೀಕಿಗಳ ಅಂತರಂಗದಲ್ಲಿ ಕಾವ್ಯವಾಣಿಯಾಗಿ ಮೊಳೆಯಿತು. ಯೋಗಮಾರ್ಗದಿಂದ ಆ ಮಹಾಕವಿಯ ಕೈಯಲ್ಲಿ ಮಹಾಕಾವ್ಯದ ಸಲ್ಲಕ್ಷಣಗಳನ್ನು ಒಳಗೊಂಡಿತು. ಶ್ರೀರಾಮಚಂದ್ರನ ದಿವ್ಯಚರಿತೆಯು 'ಶ್ರೀ ಮದ್ರಾಮಾಯಣ'ವೆಂಬ ಹೆಸರಿನಿಂದ ರೂಪುಗೊಂಡಿತು. ಪರಮಪಾವನವಾದ ಆ ಮಹಾಕಾವ್ಯವಾದ ಶ್ರೀ ಮದ್ರಾಮಾಯಣ ರಚಿಸಿದ ವಾಲ್ಮೀಕಿ ಮಹಾಮುನಿ ವರನು 'ಆದಿಕವಿ' ಎನಿಸಿದನು. ಲೋಕಪೂಜ್ಯನು ಎಂದು ವಿಖ್ಯಾತನಾದನು.

ಕವಿಯ ಮಹಾಕಾವ್ಯವು ನವರಸಭರಿತವಾಗಿದೆ. ಮಾನವೀಯ ಮೌಲ್ಯಗಳು ಮಡುಗಟ್ಟಿ ನಿಂತಿವೆ. ರೂಪುಗೊಂಡಿರುವ ಪಾತ್ರಗಳು ಸಹಜ ಸುಂದರವಾಗಿವೆ. ಅಮೂಲ್ಯ ವಾದ ಜೀವನ ಸಂದೇಶ ನೀಡಿದೆ. ಬದುಕಲು ದಾರಿ ತೋರಿದೆ. ರಾಮಾಯಣ ಸುಖದ ಸೋಪಾನವಾಗಿದೆ. ಭಕ್ತಿ-ವಿರಕ್ತಿ-ಮುಕ್ತಿಗಳ ಸಂಗಮವಾಗಿದೆ. ಪುರುಷನಾದ ರಾಮನು ಪುರುಷೋತ್ತಮನಾಗಿ ಉನ್ನತಸ್ತರವೇರಿ ವಿರಾಜಿಸಿದ್ದಾನೆ. ಹಾಗೆಯೇ ಕಪಿಯಾದ ಹನುಮ, ಅಸುರ ನಾದ ವಿಭೀಷಣ, ಪಕ್ಷಿಯಾದ ಜಟಾಯು, ಮುಗ್ಧ ಭಕ್ತೆ ಯಾದ ಶಬರಿ-ಹೀಗೆ ಅನೇಕರು ಅಲ್ಪರಾದರೂ ಶ್ರೀರಾಮನ ಎತ್ತರಕ್ಕೆ ಏರಿ ಮಹಾಕಲ್ಪನಾಗಿ ವಿರಾಜಿಸಿದ್ದಾರೆ. ಮಾನವ ರೇನು ಪಕ್ಷಿ-ಪ್ರಾಣಿಗಳೂ ಸಹ ಉದ್ಧಾರವಾಗುವ ದಾರಿ ತೋರಿದೆ. ಕವಿಯ ಮಹಾಪ್ರತಿಭೆಗೆ ವಿಜ್ಞಾನಿಯೂ ಕೂಡ ಬೆಕ್ಕಸ ಬೆರಗಾಗುತ್ತಾನೆ. ಸುಜ್ಞಾನಿ ತಲೆದೂಗುತ್ತಾನೆ. ಜಗತ್ತಿನಲ್ಲಿರುವುದೆಲ್ಲಾ ರಾಮಾಯಣದಲ್ಲಿದೆ. ರಾಮಾಯಣದಲ್ಲಿ ಇದ್ದದ್ದು ಜಗತ್ತಿನಲ್ಲಿ ಇಲ್ಲ ಎಂದರೆ ಅತಿಶಯೋಕ್ತಿಯಾಗದು. ಮಹಾಕವಿ ವಾಲ್ಮೀಕಿ ಮಹರ್ಷಿಗಳು ವಿರಚಿಸಿದ ಶ್ರೀರಾಮನ ದಿವ್ಯಚರಿತೆಯು ಮನ-ಮನೆಗಳಲ್ಲಿ ಬೆಳಗುವ ನಂದಾದೀಪ. ಬದುಕನ್ನು ಸಾರ್ಥಕಗೊಳಿಸುವ ಹಂಬಲ ಹುಟ್ಟಿಸುವ ಆಶಾರೂಪ.

ಶ್ರೀಮದ್ರಾಮಾಣವು ರೂಪುಗೊಳ್ಳಲು ಈ ಪುಣ್ಯ ಭೂಮಿ ಪಾವನವಾಯಿತು. ಭರತಮಾತೆ ಧನ್ಯಳಾದಳು. ಜಗನ್ಮಾತೆ ಮಾನ್ಯಳಾದಳು. ಮಾನವಕೋಟಿ ಪರಮಪಾವನ. ಹಿಂದೂಧರ್ಮ ವಿಶ್ವಮಾನ್ಯವಾಯಿತು. ಕತ್ತಲಿನಿಂದ ಬೆಳಕಿನೆಡೆಗೆ, ಮೃತ್ಯುಮುಖದಿಂದ ಅಮೃತತ್ವದ ಕಡೆಗೆ, ಅಜ್ಞಾನದಿಂದ ಸುಜ್ಞಾನದೆಡೆಗೆ ಕೈಹಿಡಿದು ನಡೆಸುವ ಶ್ರೀಮದ್ರಾಮಾಯಣ ಮಹಾಕಾವ್ಯಕ್ಕೆ ನಮಸ್ಕಾರ. ಆದಿಕಾವ್ಯವನ್ನು ರಚಿಸಿ ಭಾರತೀಯ ಸಂಜಾತರೆನ್ನೇನು, ವಿಶ್ವದ ಆಸ್ತಿಕರೆಲ್ಲರನ್ನು ಕೈಹಿಡಿದು ಮುನ್ನಡೆಸುವ ಕವಿಕೋಟಿಯ ಮೇಟಿ ವಾಲ್ಮೀಕಿ ಮಹರ್ಷಿಗಳಿಗೆ ನಮಸ್ಕಾರ. ವಾಲ್ಮೀಕಿ ವಚನ ರಾಮಾಯಣದ ಕೃತಿಗಳನ್ನು ಮನೆಮನಗಳಿಗೆ ಮುಟ್ಟಿಸಲು ಮುಂದಾದ ಪುಣ್ಯಜೀವಿಗಳಿಗೆ ನಮಸ್ಕಾರ. ರಾಮಾಯಣವನ್ನು ಪಾರಾಯಣ ಮಾಡಲು ಮುಂದಾಗುವ ಭಕ್ತಕೋಟಿಗೆ ನಮಸ್ಕಾರ. ವಾಲ್ಮೀಕಿ ಮಹಾಮುನಿಗಳಿಗೆ ಅನಂತಾನಂತ ನಮಸ್ಕಾರಗಳು.

> ಧರ್ಮ ಬೇರೆಯಲ್ಲ, ರಾಜಕಾರಣ ಬೇರೆಯಲ್ಲ. ವ್ಯಾಖ್ಯಾನ ಮಾಡಲು ಅವು ತತ್ವಗಳಲ್ಲ. ಅವು ಆಚರಣೆಗೆ ತರಬೇಕಾದಂತಹವು. ಸತ್ಯ ನಮ್ಮ ಜೀವನದಲ್ಲಿ, ನಮ್ಮ ಸಮಾಜ ಆಲೋಚನೆಯಲ್ಲಿ ಪ್ರಧಾನವಾಗಿ ಭಾಗವಹಿಸಬೇಕು.
>
> -ಮಹಾತ್ಮ ಗಾಂಧೀಜಿ





## ಡಾ॥ ಎಸ್.ಎಲ್. ಭೈರಪ್ಪ



'ನನ್ನಲ್ಲಿ ಸಾವು ಎಂದರೇನು? ಅದರ ಅರ್ಥವೇನು? ಅದು ಯಾಕೆ ಬರುತ್ತದೆ?' ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತ ನಡೆದಿರುವ ಡಾ॥ ಭೈರಪ್ಪನವರು 'ಜೀವನದ ಅರ್ಥವನ್ನು ಹುಡುಕಲು ನನಗೆ ಸಾಹಿತ್ಯವೇ ಮಾಧ್ಯಮ' ಎನ್ನುತ್ತಾರೆ. ಅದಕ್ಕಾಗಿ ಶ್ರೀಯುತರು ಅಧ್ಯಯನ ತಪಸ್ವಿಗಳಾದವರು. ಸತ್ಯಾನ್ವೇಷಿಗಳಾದರು. ನಿಂದೆ-ನಿಷ್ಠೂರಗಳನ್ನು ಸಮಚಿತ್ತರಾಗಿ ಸ್ವಾಗತಿಸಿದರು. ತತ್ವಶಾಸ್ತ್ರದ ಬೆಳಕಿನಲ್ಲಿ ಸಾಹಿತ್ಯ ಕೃತಿಗಳನ್ನು ರಚಿಸುತ್ತ ನಡೆದರು. 'ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿನಿಂದೆಗಳಿಗೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು' ಎಂದು ನಂಬಿ ನಡೆದವರು. ಬಡತನದ ಕುಲುಮೆಯಲ್ಲಿ ಅರಳಿದ ಬಂಗಾರ ವಾದ ಭೈರಪ್ಪನವರ ಒಂದೊಂದು ಕೃತಿಯಲ್ಲಿ ಜೀವನ ದರ್ಶನವಿರುವುದನ್ನು ಉದ್ವೇಗ ರಹಿತ, ಭ್ರಾಂತಿ ಭ್ರಮೆಗಳಿಲ್ಲದ ಮನಸ್ಸು ಗ್ರಹಿಸಬಲ್ಲುದು.

ಡಾ॥ ಭೈರಪ್ಪನವರು 'ಗತಜನ್ಮ (೧೯೫೫) ಮತ್ತೆರಡು ಕೃತಿಗಳು, ಭೀಮಕಾಯ, ಜಲಪಾತ, ನಾಯಿ-ನೆರಳು, ತಬ್ಬಲಿಯು ನೀನಾದೆ ಮಗನೆ, ಗೃಹಭಂಗ, ನಿರಾಕರಣ, ಗ್ರಹಣ, ದಾಟು, ಅನ್ವೇಷಣ, ಪರ್ವ, ನೆಲೆ, ಸಾಕ್ಷಿ, ಅಂಚು, ತಂತು, ಸಾರ್ಥ, ಮಂದ್ರ, ಆವರಣ, ಕವಲು, ಆತ್ಮವೃತ್ತಾಂತ ಭಿತ್ತಿ, ಸಾಹಿತ್ಯ ಮತ್ತು ಪ್ರತೀಕ, ಸತ್ಯ ಮತ್ತು ಸೌಂದರ್ಯ, ಕಥೆ ಮತ್ತು ಕಥಾವಸ್ತು, ನಾನೇಕೆ ಬರೆಯುತ್ತೇನೆ, ಸಂದರ್ಭ, ಸಂವಾದ ಕೃತಿಗಳನ್ನು ನೀಡಿರುವ 'ಕನ್ನಡದ ಸಿರಿ' ಉದ್ದಾಮ ಸಾಹಿತಿ ಡಾ॥ ಎಸ್.ಎಸ್. ಭೈರಪ್ಪನವರು.

ಕನಕಪುರದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಕ್ಕೆ ಪಾತ್ರರಾಗಿರುವ ಡಾ॥ ಭೈರಪ್ಪನವರಿಗೆ ಕೆ.ಕೆ. ಬಿರ್ಲಾ ಪೌಂಡೇಷನ್ ಸ್ಥಾಪಿಸಿರುವ 'ಸರಸ್ವತಿ ಸಮ್ಮಾನ್' ಪ್ರಶಸ್ತಿ ಅವರ 'ಮಂದ್ರ' ಕಾದಂಬರಿ ಕೃತಿಗೆ ಸಂದಿರುವುದು ಕನ್ನಡಿಗರೆಲ್ಲರಿಗೂ ಹರ್ಷವನ್ನು ತಂದಿದೆ.

ಈ ಶುಭಮಂಗಳ ಸಂದರ್ಭದಲ್ಲಿ 'ಕನ್ನಡದಸಿರಿ'ಯಾಗಿರುವ ಡಾ॥ ಎಸ್.ಎಲ್. ಭೈರಪ್ಪನವರಿಗೆ ಅಭಿಮಾನದ ಅಭಿನಂದನೆಗಳನ್ನು ಸಲ್ಲಿಸಲು 'ಸಿದ್ಧಗಂಗಾ' ಸಂತೋಷಿಸುತ್ತದೆ.

## ಕನ್ನಡದ ಸಿರಿ ಇವರು ಡಾ॥ ಚಂದ್ರಶೇಖರ ಕಂಬಾರ



ಜಾನಪದ 'ನೆಲದ ಮರೆಯ ನಿಧಾನ'. ತಳಸ್ತರ ಸಮಾಜದಲ್ಲಿ ಅರಳಿದ ಅಷ್ಟದಳ ಕಮಲ. ಕನ್ನಡದ ಘಮ ಘಮಿಸುವ ಕಸ್ತೂರಿ ಡಾ॥ ಕಂಬಾರ. ಕನ್ನಡಕ್ಕೆ ಜ್ಞಾನಪೀಠ ಪ್ರಶಸ್ತಿಯನ್ನು ಮುಡಿಸಿದ ನುಡಿ ಕಿಂಕರ. ಹುಟ್ಟಿದ್ದು ಬೆಳಗಾವಿ ಜಿಲ್ಲೆ ಘೋಡಗೇರಿ ಗ್ರಾಮ. ತಂದೆ ಬಸವಣ್ಣೆಪ್ಪ. ತಾಯಿ ಚೆನ್ನಮ್ಮ. ಜನ್ಮದಿನಾಂಕ ೦೨-೦೨-೧೯೩೭. ಎಂ.ಎ. ಪದವಿ ಪಡೆದದ್ದು ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೬೨ರಲ್ಲಿ. ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ. ಡಾ॥ ಕಂಬಾರರ ವ್ಯಕ್ತಿತ್ವ ವಿಕಸನಕ್ಕೆ ಸೋಪಾನವಾದದ್ದು ಕನ್ನಡ ಅಧ್ಯಯನ ಸಂಸ್ಥೆ. ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರ ಮಾರ್ಗದರ್ಶನ. ಡಾ॥ ಕಂಬಾರರ ಕಣ್ಬೆಳಕಿನಲ್ಲಿ ಅರಳಿದವರು ಸಾವಿರಾರು ವಿದ್ಯಾರ್ಥಿಗಳು. ಸಮರ್ಥ ಪ್ರಾಧ್ಯಾಪಕರೆಂಬ ಖ್ಯಾತಿ. ದಕ್ಷ ಆಡಳಿತಕ್ಕೆ ಹೆಸರು. ಅವರು ವಹಿಸಿದ ಅಧಿಕಾರ ಸ್ಥಾನಗಳು ಹಲವು. ಜಾನಪದ ಅಕಾಡಮೆಯ ಅಧ್ಯಕ್ಷರಾಗಿ, ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ರಾಷ್ಟ್ರೀಯ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ, ಹಂಪೆಯ ಕನ್ನಡ ವಿಶ್ವ ವಿದ್ಯಾಲಯದ ಸ್ಥಾಪಕ ಕುಲಪತಿಗಳಾಗಿ ಮತ್ತು ಶ್ರೀಮಠದ ಪರಮಪೂಜ್ಯ ಶ್ರೀ ಶ್ರೀಗಳವರ ಶತಮಾನೋತ್ಸವ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಇದರ ಜೊತೆಗೆ ವಿಧಾನ ಪರಿಷತ್ ಸದಸ್ಯರಾಗಿ ಕನ್ನಡಪರ ಸೇವೆ ಮಾಡಿರುತ್ತಾರೆ.

ಡಾ॥ ಕಂಬಾರರು ಹತ್ತು ಕವನ ಸಂಕಲನ, ಹತ್ತೊಂಬತ್ತು ನಾಟಕ, ಐದು ಕಾದಂಬರಿ, ಹದಿಮೂರು ಸಂಶೋಧನಾ ಕೃತಿ, ಒಂದು ಪಿ.ಹೆಚ್.ಡಿ. ಮಹಾಪ್ರಬಂಧ ಗಳನ್ನು ರಚಿಸಿರುತ್ತಾರೆ. ಅವರ ಎಲ್ಲ ಕೃತಿಗಳಲ್ಲೂ ಜನಪದದ ಸಿರಿಗಂಧ ಪರಿಮಳಿಸುತ್ತದೆ.

ರಾಜ್ಯನಾಟಕ ಅಕಾಡೆಮಿ, ರಾಜ್ಯ ಸಾಹಿತ್ಯ ಅಕಾಡೆಮಿ, ಕೇರಳದ ಆಶಾನ್ ಪ್ರಶಸ್ತಿ, ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಪದ್ಮಶ್ರೀ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಟ್ಯಾಗೋರ್ ಪ್ರಶಸ್ತಿ, ಕಬೀರ್ ಸಮ್ಮಾನ್ ಪ್ರಶಸ್ತಿ, ಪುರಸ್ಕೃತರಾಗಿದ್ದು ಇದೀಗ ಕನ್ನಡಕ್ಕೆ ಎಂಟನೆಯ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ 'ಕನ್ನಡದಸಿರಿ'ಯಾಗಿರುವ ಸಂದರ್ಭದಲ್ಲಿ 'ಸಿದ್ಧಗಂಗಾ' ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

## ಕನ್ನಡದ ಸಿರಿ ಇವರು ಜಿ. ನಾರಾಯಣ



ಸ್ವಾತಂತ್ರ್ಯ ಹೋರಾಟಗಾರರು, ಗಾಂಧಿವಾದಿಗಳು, ಬೆಂಗಳೂರು ನಗರದ ಮಾಜಿ ಮೇಯರ್, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು, ಜಾನಪದ ಲೋಕದ ಅಧ್ಯಕ್ಷರು ಆಗಿದ್ದ ಸನ್ಮಾನ್ಯ ಶ್ರೀ ಜಿ. ನಾರಾಯಣ ಅವರು ದಿನಾಂಕ ೨೦-೧೧-೨೦೧೧ರಂದು ದೈವಾಧೀನರಾದು ದನ್ನು ತಿಳಿದು ಅತೀವ ದುಃಖವಾಯಿತು.

ಶ್ರೀಯುತರು ಸರಳ ಸಜ್ಜನಿಕೆಯ ವ್ಯಕ್ತಿತ್ವವುಳ್ಳವರಾಗಿದ್ದರು. ಪ್ರಾಮಾಣಿಕ ಅವರ ಐಶ್ವರ್ಯವಾಗಿತ್ತು. ಅಧಿಕಾರ ಸ್ಥಾನದಲ್ಲಿದ್ದರೂ ಸರಳ ಸ್ವಭಾವದಿಂದ ಸೇವೆ ಮಾಡುತ್ತಿದ್ದು, ತಾವು ಅಲಂಕರಿಸಿದ ಸ್ಥಾನಗಳಿಗೆ ಘನತೆ ಗೌರವಗಳನ್ನು ತಂದ ಸುಸಂಸ್ಕೃತರಾಗಿದ್ದರು, ಮೃದುಭಾಷಿಗಳಾಗಿದ್ದರು. ಅವರ ಅಗಲಿಕೆಯಿಂದ ಕನ್ನಡ ಸಾರಸ್ವತ ಲೋಕಕ್ಕೆ, ಸಮಾಜಕ್ಕೆ, ನಾಡಿಗೆ, ತುಂಬಲಾರದ ನಷ್ಟವಾಗಿದೆ.

ಕನ್ನಡ ನಾಡು ನುಡಿಗಳಿಗೆ ಸದಾಕಾಲ ಚಿಂತನೆ ನಡೆಸಿದ್ದರು. ಶ್ರೀಮಠದೊಂದಿಗೆ ಬಾಂಧವ್ಯವನ್ನು ಬೆಳೆಸಿಕೊಂಡು ಬಂದಿದ್ದರು. ಅಪ್ಪಟ ಖಾದಿ ವಸ್ತ್ರಧಾರಿಗಳಾಗಿ ಗಾಂಧಿ ತತ್ವದ ಅನುಯಾಯಿಗಳಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿಗೆ, ಜಾನಪದ ಲೋಕಕ್ಕೆ ವಿಶೇಷವಾಗಿ ದುಡಿಯುತ್ತಿದ್ದರು. ಅಗಲಿದ ಶ್ರೀ ಜಿ. ನಾರಾಯಣರ ಆತ್ಮಕ್ಕೆ ದಯಾಮಯ ನಾದ ಪರಶಿವನು ಚಿರಶಾಂತಿಯನ್ನು ಅನುಗ್ರಹಿಸಲೆಂದು ಆಶಿಸುತ್ತಾ, ಅವರ ಕುಟುಂಬವರ್ಗದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ನೀಡಲೆಂದು ಆಶಿಸುತ್ತೇವೆ.

(ಶ್ರೀ ಶಿವಕುಮಾರಸ್ವಾಮಿಗಳು)
ಶ್ರೀ ಸಿದ್ಧಗಂಗಾಮಠ.

## ಮನದ ದುರಾಶೆಯನ್ನು ಬಿಡಿಸು

ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ
ತನ್ನ ನೂಲು ತನ್ನನ್ನೇ ಸುತ್ತಿ ಸುತ್ತಿ ಸಾವ ತೆರನಂತೆ
ಮನ ಬಂದುದ ಬಯಸಿ ಬಯಸಿ ಬೇವುತ್ತಿರುವೆನಯ್ಯಾ
ಅಯ್ಯಾ, ಎನ್ನ ಮನದ ದುರಾಶೆಯ ಬಿಡಿಸಿ
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ

-ಅಕ್ಕಮಹಾದೇವಿ

ಮನುಷ್ಯನಷ್ಟು ದುರಾಶೆ ಜಗತ್ತಿನಲ್ಲಿ ಯಾವ ಪ್ರಾಣಿಗಳಿಗೂ ಇರುವುದಿಲ್ಲ. ದುಃಖಕ್ಕೆ ಮೂಲ ಕಾರಣ ಆಶೆಯೆಂಬುದು ಭವದ ಬೀಜ. ನಿರಾಶೆ ಎಂಬುದು ನಿತ್ಯಮುಕ್ತಿ ಎಂದು ಶರಣರು ಹೇಳಿದ್ದಾರೆ. ತೆರಣಿಯಹುಳು ತನ್ನ ಸ್ನೇಹದಿಂದ ಮನೆಯ ಮಾಡಿ, ತನ್ನ ನೂಲಿನಿಂದ ತನ್ನನ್ನೇ ಸುತ್ತಿಕೊಂಡು ಸತ್ತು ಹೋಗುವುದು. ಅದೇ ರೀತಿ ಮನುಷ್ಯನು ತನ್ನ ಮನಸ್ಸಿಗೆ ಬಂದದ್ದನ್ನು ಬಯಸುತ್ತಾನೆ. ಯಾವುದನ್ನು ಬಯಸಬೇಕು, ಯಾವುದನ್ನು ಬಯಸಬಾರದು ಎಂಬ ತಾರತಮ್ಯ ಜ್ಞಾನವಿರುವುದಿಲ್ಲ. ಜಗತ್ತಿನಲ್ಲಿರುವ ಎಲ್ಲ ವಸ್ತುಗಳು ದೊರೆಯಬೇಕು. ಹೆಣ್ಣು, ಮಣ್ಣು, ಹೊನ್ನು ಬಯಸಿದ್ದು ಸಿಗಬೇಕು. ಅನೇಕ ದುರಾಲೋಚನೆಗಳನ್ನು ಮಾಡಿ ಆಸ್ತಿ ಸಂಪಾದಿಸುತ್ತಾನೆ. ಆಸೆಗೆ ಮಿತಿ ಇಲ್ಲ. ಅಂತ್ಯ ಇಲ್ಲ. ಸಹಸ್ರಾರು ವರ್ಷಗಳಿಂದ ಮನುಷ್ಯನು ಈ ಆಶೆ ಮಾಡಿ ದೇಶ ಗೆದ್ದುಕೊಳ್ಳುವುದು ಅದು ಆನಂತರ ಇನ್ನೊಬ್ಬರ ಪಾಲಾಗುವುದು ಆಶೆಯು ಅವನನ್ನು ಕೂಡಿಸಿಗೊಡುವುದಿಲ್ಲ. ಹೆಣ್ಣು ಮಾಯೆ ಅಲ್ಲ, ಮಣ್ಣು ಮಾಯೆ ಅಲ್ಲ, ಹೊನ್ನು ಮಾಯೆ ಅಲ್ಲ. ಮನದ ಮುಂದಿನ ಆಶೆಯೇ ಮಾಯೆ. ಆಶೆಗೆ ಮಿತಿ ಇಲ್ಲದೆ ಸಂಸಾರ ಮಾಡಿದರೆ, ಅಧೋಗತಿಗೆ ಹೋಗಬೇಕಾಗುವುದು. ಆಶೆ, ಆಮಿಷ, ರೋಷ, ದ್ವೇಷಗಳನ್ನು ಹತ್ತಿಕ್ಕಿ ನಡೆಸಿದರೆ ಸಂಸಾರಕ್ಕಿಂತ ಸುಲಲಿತವಾದುದು ಬೇರೊಂದಿಲ್ಲ. ಇಂಥ ಆಶೆಗಳನ್ನು ಹುಟ್ಟಿಸಬೇಡ. ನನ್ನ ಮನದ ಆ ದುರಾಶೆಗಳನ್ನು ಬಿಡಿಸಿ ಸದಾ ನಿಮ್ಮ ಧ್ಯಾನದಲ್ಲಿ ಇರುವಂತೆ ಕೃಪೆ ಮಾಡು ದೇವಾ ಎಂದು ಚನ್ನಬಸವಣ್ಣನವರು ಸಂಸಾರದ ಇತಿಮಿತಿಗಳನ್ನು ತಿಳಿಸುತ್ತಾರೆ. ಸಂಸಾರದ ಆಶೆಯ ಭಾರವನ್ನು ಕಡಿಮೆ ಮಾಡಿಸಲು ನಾವು ದೇವರಲ್ಲಿ ಮೊರೆ ಹೋಗಬೇಕು. ಇಷ್ಟಲಿಂಗ ನಿಷ್ಠೆಯನ್ನು ಬಲಪಡಿಸಿಕೊಂಡು, ಆಧ್ಯಾತ್ಮಿಕ ಶಕ್ತಿಯನ್ನು ವೃದ್ಧಿಸಿಕೊಂಡು. ನಮ್ಮ ಬೇಕು. ಬೇಡಗಳನ್ನು ಆತನಿಗೆ ಸಮರ್ಪಿಸಿಕೊಂಡು ಶಾಂತಿಯಿಂದ ಜೀವನ ಸಾಗಿಸಬೇಕು.

-ಲಿಂಗಬಸಪ್ಪ ಅಂಗಡಿ, ರಾಯಚೂರು









ಕಸ್ತೂರಿಯ ಕಂಪು ಕನ್ನಡ ಅಜರಾಮರವಾಗಿರಲಿ
ಕನ್ನಡಿಗರು ಕಳಸಪ್ರಾಯವಾಗಿರಲಿ
ಕನ್ನಡಾಂಬೆಯ ಕೀರ್ತಿ ಮೇರುಸದೃಶವಾಗಿ ಸದಾ ಮೊಳಗಲಿ



ನಾಡಿನ ಸಮಸ್ತ ಜನತೆಗೆ
56ನೇ ರಾಜ್ಯೋತ್ಸವದ
ಹಾರ್ದಿಕ ಶುಭಾಶಯಗಳು



56ನೇ ಕರ್ನಾಟಕ ರಾಜ್ಯೋತ್ಸವ
ನವೆಂಬರ್, 2011

ಡಿ.ವಿ. ಸದಾನಂದಗೌಡ
ಮುಖ್ಯಮಂತ್ರಿಗಳು

ಕಸ್ತೂರಿ ಕನ್ನಡದ ಕಂಪು ಪಸರಿಸೋಣ-
ನಾಡಿನ ಕೀರ್ತಿ ಪತಾಕೆಯನ್ನು ಮುಗಿಲೆತ್ತರಕ್ಕೆ ಹಾರಿಸೋಣ.

ಅಭಿವೃದ್ಧಿಯೇ ಆಡಳಿತ ಮಂತ್ರ

ಕರ್ನಾಟಕ ವಾರ್ತೆ

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು–572 103.

| | | |
|---|---|---|
| ಸದಸ್ಯರ ಸಂಖ್ಯೆ | : | 1554 |
| ಷೇರು ಮೊಬಲಗು | : | ರೂ. 49,52,100–00 |
| ವಾರ್ಷಿಕ ವಹಿವಾಟು | : | 10.48 ಕೋಟಿ |

*ಖಾಯಂ ಶೇವಣಿ ಮೇಲಿನ ಬಡ್ಡಿ*

| | |
|---|---|
| 46 ದಿನಗಳಿಂದ 1 ವರ್ಷಕ್ಕೆ 7% | 1 ವರ್ಷದಿಂದ 2 ವರ್ಷಕ್ಕೆ 8% |
| 2 ವರ್ಷದಿಂದ 3 ವರ್ಷಕ್ಕೆ 8% | 3 ವರ್ಷಕ್ಕೆ ಮೇಲ್ಪಟ್ಟು 9% |

*ಸದಸ್ಯರುಗಳಿಗೆ ಸಾಲದ ಸೌಲಭ್ಯ : ರೂ. 3,00,000 ಗಳವರೆಗೆ*

ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು
ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ
ಅಧ್ಯಕ್ಷರು

ಶ್ರೀ ಸಿ. ಮೋಹನ್‌ಕುಮಾರ್
ಕಾರ್ಯದರ್ಶಿ

*ಸ್ಥಾಪನೆ : 1995*

*ಶುಭಾಶಯಗಳೊಂದಿಗೆ*

*ದೂರವಾಣಿ: 2277267*

ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

*ಫ್ಯಾಕ್ಸ್: 2277267*

## ಶ್ರೀ ಸಿದ್ಧಗಂಗಾ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,

ಬಿ.ಹೆಚ್. ರಸ್ತೆ, ತುಮಕೂರು–572 103.

ಪ್ರಗತಿ ನೋಟ (31–03–2011ರಲ್ಲಿದ್ದಂತೆ) ಮತ್ತು ಶೇವಣಿಗಳು

| | | | |
|---|---|---|---|
| ಸದಸ್ಯರ ಸಂಖ್ಯೆ | 3765 | ಸಾಲಗಳು | 3705.51 |
| ಪಾವತಿಯಾದ ಷೇರು ಬಂಡವಾಳ | 202.96 | ಹೂಡಿಕೆಗಳು | 1739.02 |
| ಆಪದ್ಧನ ಮತ್ತು ನಿಧಿಗಳು | 463.24 | ದುಡಿಯುವ ಬಂಡವಾಳ | 5652.11 |
| ಶೇವಣಿಗಳು | 4985.91 | ನಿವ್ವಳ ಲಾಭ (ತೆರಿಗೆ ನಂತರ) | 54.39 |

ಶೇವಣಿ ಮೇಲಿನ ಬಡ್ಡಿದರಗಳು

| | |
|---|---|
| 46 ದಿವಸಗಳಿಂದ 90 ದಿವಸಗಳವರೆಗೆ | – ಶೇ. 6 |
| 91 ದಿವಸಗಳಿಂದ 180 ದಿವಸಗಳವರೆಗೆ | – ಶೇ. 8 |
| 181 ದಿವಸಗಳಿಂದ 365 ದಿವಸಗಳವರೆಗೆ | – ಶೇ. 9 |
| 1 ಮೇಲ್ಪಟ್ಟು 2 ವರ್ಷದವರೆಗೆ | – ಶೇ.10 |
| 2 ಮೇಲ್ಪಟ್ಟು 3 ವರ್ಷದವರೆಗೆ | – ಶೇ.11 |
| 3 ಮೇಲ್ಪಟ್ಟು | – ಶೇ. 9 |

ಹಿರಿಯ ನಾಗರಿಕರಿಗೆ, ವಿಧವೆಯರಿಗೆ, ಧರ್ಮದತ್ತಿ ಸಂಸ್ಥೆಗಳಿಗೆ, ಅಂಗವಿಕಲರಿಗೆ, ಒಂದು ವರ್ಷ ಮೇಲ್ಪಟ್ಟ ಶೇವಣಿಗಳ ಮೇಲೆ 1/2% ಅಧಿಕ ಬಡ್ಡಿ ದರವನ್ನು ಅವರ ಶೇವಣಿಗಳ ಮೇಲೆ ನೀಡಲಾಗುವುದು. ಒಂದು ಲಕ್ಷದವರೆಗಿನ ಶೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ) ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ, ಅಡಮಾನ ಸಾಲ, ಹೊಸ/ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ, ವಸ್ತು ಬಳಕೆದಾರರ ಸಾಲ, ಮೀರೆಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 14

### ನೂತನ ಶಾಖೆಗಳು

ಸಿದ್ಧಗಂಗಾ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ,
ಬಿ.ಹೆಚ್. ರಸ್ತೆ, ತುಮಕೂರು.ದೂ: 0816–2277273

ಸಿದ್ಧಗಂಗಾ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,
ಹಾಸ್ಪಿಟಲ್ ರಸ್ತೆ, ಡಾಬಸ್‌ಪೇಟೆ(ಸೋಂಪುರ) ನೆಲಮಂಗಲ ತಾ,
ಬೆಂ.ಗ್ರಾ.ಜಿಲ್ಲೆ. ದೂ: 0816–7735409

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

ಶ್ರೀ ಹೆಚ್.ಕೆ. ಶಿವಪ್ರಕಾಶ್
ವ್ಯವಸ್ಥಾಪಕರು





## ಅರುಣ
ಸಿಲ್ಕ್ ಪ್ಯಾರಡೈಸ್




ನಮ್ಮೆಲ್ಲಾ ಗ್ರಾಹಕರಿಗೆ

## ದಸರಾ ಹಾಗೂ ದೀಪಾವಳಿ

ಹಬ್ಬದ ಶುಭಾಶಯಗಳು



- ರೇಷ್ಮೆ ಸೀರೆಗಳು
- ಫ್ಯಾನ್ಸಿ ಸೀರೆಗಳು
- ಡಿಸೈನರ್ ಸೀರೆಗಳು
- ಡ್ರೆಸ್ ಮೆಟೀರಿಯಲ್‌ಗಳು
- ಫ್ಯಾಶನ್ ಜ್ಯುವಲರಿ

ಹಬ್ಬದ ಹಾಗೂ ವಾರ್ಷಿಕೋತ್ಸವದ ಪ್ರಯುಕ್ತ

**10% ರಿಂದ 50%**

ರಿಯಾಯಿತಿ

ಬೆಂಗಳೂರು : ನಂ. 713, 'ಜಿಂಕಾ ಅವೆನ್ಯೂ' ಮೋದಿ ಹಾಸ್ಪಿಟಲ್ ರೋಡ್, (ವೆಸ್ಟ್ ಆಫ್ ಕಾರ್ಡ್ ರೋಡ್), ರಾಜಾಜಿನಗರ, ಬೆಂಗಳೂರು – 86. ದೂ : 080–23197755 / 41279498. **E-mail:** arunasilkparadise@gmail.com

ದಾವಣಗೆರೆ : ಅರುಣ ಸಿಲ್ಕ್ಸ್ ಅಂಡ್ ಸ್ಯಾರಿಸ್, ನಂ. 323/1, 'ಜಿಂಕಾ ಪ್ಲಾಜ಼' ಬಿನ್ನಿ ಕಂಪನಿ ರಸ್ತೆ, ದಾವಣಗೆರೆ – 01. ದೂ : 08192–256548

ಭಾನುವಾರ ಸಹ ತೆರೆದಿರುತ್ತದೆ.

ವಿಶಾಲ ವಾಹನ ನಿಲುಗಡೆ ಸೌಲಭ್ಯವಿದೆ.

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ಶ್ರೀಮಠದಲ್ಲಿ ಪೂಜ್ಯ ಶ್ರೀಗಳವರ ಕಛೇರಿಯಲ್ಲಿ ನಡೆದ ಸರಳ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಮಠದ 2012ರ ದಿನದರ್ಶಿಕೆಯನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು, ಕೊಡ್ಲಿಪೇಟೆ ಶ್ರೀಗಳು, ಹೊನ್ನಮ್ಮಗವಿ ಮಠದ ಶ್ರೀಗಳು, ಶಾಸಕ ಶ್ರೀ ಸೊಗಡು ಶಿವಣ್ಣ, ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ, ಆಡಳಿತಾಧಿಕಾರಿಗಳು ಹಾಗೂ ಮೊದಲಾದ ಗಣ್ಯರು ಉಪಸ್ಥಿತರಿದ್ದರು.




ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಪ್ರಸಕ್ತ ಸಾಲಿನ ನೂತನ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ಸ್ವಾಗತ ಸಮಾರಂಭವನ್ನು ಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಡಾ. ಎಂ.ಎನ್. ಚನ್ನಬಸಪ್ಪ, ಪ್ರಾಚಾರ್ಯ ಶ್ರೀ ಶಿವಕುಮಾರಯ್ಯ ಮೊದಲಾದವರು ಉಪಸ್ಥಿತರಿದ್ದರು.



ಆಂಧ್ರ ಪ್ರದೇಶದ ಮಡಕಶಿರಾ ತಾಲ್ಲೂಕು ಅಗಳಿಯಲ್ಲಿ ನೂತನ ಕಲ್ಯಾಣ ಮಂಟಪವನ್ನು ಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದ ಸಂದರ್ಭದಲ್ಲಿ ಪೂಜ್ಯ ಶ್ರೀಗಳವರ ಪಾದಪೂಜೆ ನೆರವೇರಿಸಿದರು. ಪಾದಪೂಜೆಯಲ್ಲಿ ಶ್ರೀ ರಾಮಕೃಷ್ಣಯ್ಯ, ಶ್ರೀ ಗಿರೀಶ್ ಅವರ ಕುಟುಂಬದವರು ಭಾಗವಹಿಸಿದ್ದರು.



ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜಿನಲ್ಲಿ ನಡೆದ 'ಸಂಸ್ಕೃತಿ' ಉದ್ಘಾಟನಾ ಸಮಾರಂಭವನ್ನು ಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್, ಸಾಹಿತಿ ಶ್ರೀ ಕವಿತಾಕೃಷ್ಣ ಶ್ರೀ ರೇಣುಕಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ತುಮಕೂರಿನಲ್ಲಿ ಶ್ರೀ ಬಸವೇಶ್ವರ ಕ್ರೆಡಿಟ್ ಕೋ-ಆಪರೇಟಿವ್ ಲಿ.,ನ ನೂತನ ಕಟ್ಟಡವನ್ನು ಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಸಂಸ್ಥೆಯ ಅಧ್ಯಕ್ಷ ಶ್ರೀ ಟಿ.ಸಿ. ಓಹಿಲೇಶ್ವರ, ಉಪಾಧ್ಯಕ್ಷ ಶ್ರೀ ಎಸ್.ಎಂ. ರಾಜ ಹಾಗೂ ನಿರ್ದೇಶಕರು ಪೂಜ್ಯ ಶ್ರೀಗಳವರಿಗೆ ಭಕ್ತಿ ಸಮರ್ಪಣೆ ಮಾಡಿದರು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232